ಶ್ರೀಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆ - ೨೮

ಶ್ರೀ ಮಾಯಿದೇವ

ಕೃತ

# ವಿಶೇಷಾರ್ಥಪ್ರಕಾಶಿಕಾ

ಕನ್ನಡಭಾವಾರ್ಥಬೋಧಿನೀ

ಟೀಕಾಸಹಿತಾ

***


ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಶ್ರೀ ಮುರುಘಾಮಠ

ಧಾರವಾಡ




***


ಸಂಪಾದಕರು :

ಆಸ್ಥಾನ ವಿದ್ವಾನ್. ಪಂಡಿತ ವೈ. ನಾಗೇಶಶಾಸ್ತ್ರಿಗಳು

ಬಳ್ಳಾರಿ

ಶ್ರೀಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ - ೨೮

ಶ್ರೀ ಮಾಯಿದೇವ

ಕೃತ

# ವಿಶೇಷಾರ್ಥಪ್ರಕಾಶಿಕಾ

ಕನ್ನಡಭಾವಾರ್ಥಬೋಧಿನೀ

ಟೀಕಾಸಹಿತಾ

*
*

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಶ್ರೀ ಮುರುಘಾಮಠ

ಧಾರವಾಡ

*
*

ಸಂಪಾದಕರು :

ಆಸ್ಥಾನ ವಿದ್ವಾನ್ ಪಂಡಿತ ವೈ. ನಾಗೇಶಶಾಸ್ತ್ರಿಗಳು

ಬಳ್ಳಾರಿ



ಶ್ರೀ. ನಿ. ಪ್ರ. ಸ್ವ. ಮುರುಘೇಂದ್ರ ಮಹಾಶಿವಯೋಗಿಗಳು
ಗಚ್ಚಿನಮಠ, ಅಥಣಿ

# ಅರ್ಪಣೆ

ಶಿವಶರಣರ ಸಾಮರಸ್ಯದ ಮಾರ್ಗದಲ್ಲಿ ನಡೆದು

ಶಿವಯೋಗವನ್ನಾಚರಿಸಿ

ಪರಮವೈರಾಗ್ಯಮೂರ್ತಿಗಳು

ಮತ್ತು ಮಹಾಶಿವಯೋಗಿಗಳೆನಿಸಿ

ಮೆರೆದ

ಅಥಣಿ ಗಚ್ಚಿನಮಠದ

ಲಿಂಗೈಕ್ಯ

ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ

**ಶ್ರೀ ಮುರುಘೇಂದ್ರ ಶಿವಯೋಗಿಗಳ**

ದಿವ್ಯಪಾದಪದ್ಮಂಗಳಲ್ಲಿ

ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ

ಸಮರ್ಪಿಸಲಾಗಿದೆ.

# ಮುನ್ನುಡಿ

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ೨೮ ನೆಯ ಪುಷ್ಪವಾಗಿ ಮೊಗ್ಗೆಯ ಮಾಯಿದೇವರು ವಿರಚಿಸಿದ ವಿಶೇಷಾರ್ಥ-ಪ್ರಕಾಶಿಕೆಯು ಇದೀಗ ಪ್ರಕಟವಾಗಿದೆ. ಅದನ್ನು ಸಾಹಿತ್ಯಶರಣರೂ ತತ್ತ್ವ-ಜಿಜ್ಞಾಸುಗಳೂ ಭಕ್ತಿಯಿಂದ ಬರಮಾಡಿಕೊಳ್ಳಬೇಕು.

ಮೊಗ್ಗೆಯ ಮಾಯಿದೇವರು ಹಿರಿಯ ಶಿವಾನುಭಾವಿಗಳು, ಸಿದ್ಧ ಕವಿಗಳು ಮತ್ತು ಉಭಯ ಭಾಷಾವಿಶಾರದರು. ಅವರು ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕಾವ್ಯಗಳನ್ನು ಬರೆದು ಅದ್ವಿತೀಯ ಪಂಡಿತರೆನಿಸಿಕೊಂಡಿದ್ದಾರೆ. ಕನ್ನಡದಲ್ಲಿ ಪ್ರಭುಗೀತೆ, ಏಕೋತ್ತರಶತಸ್ಥಲಷಟ್ಪದಿ, ಷಟ್‌ಸ್ಥಲಗದ್ಯ, ಶತಕತ್ರಯ, ವಚನ ಮೊದಲಾದ ಕೃತಿಗಳನ್ನು ರಚಿಸಿದ್ದಲ್ಲದೆ ಸಂಸ್ಕೃತದಲ್ಲಿ ಶಿವಾನುಭವಸೂತ್ರ, ವಿಶೇಷಾರ್ಥಪ್ರಕಾಶಿಕೆಗಳನ್ನು ಬರೆದಿದ್ದಾರೆ. ಅವರು ಬರೆದ ಶಿವಾನುಭವಸೂತ್ರವು ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ಈ ಮೊದಲೇ ಅಚ್ಚಾಗಿದ್ದು ಈಗ ವಿಶೇಷಾರ್ಥಪ್ರಕಾಶಿಕೆಯು ಅಲ್ಲಿಯೇ ಪ್ರಕಟವಾಗಿರುವುದು ಒಂದು ರೀತಿಯಿಂದ ಒಳ್ಳೆಯದೇ ಆಗಿದೆ. ಇವೆರಡೂ ಕೃತಿಗಳು ಭಿನ್ನಭಿನ್ನ-ವಾಗಿದ್ದರೂ ವಿಷಯದೃಷ್ಟಿಯಿಂದ ಒಂದೇ ಆಗಿವೆ. ಶಿವಾನುಭವಸೂತ್ರದಲ್ಲಿ ಷಟ್‌ಸ್ಥಲವಿಷಯವು ಪೂರ್ಣವಾಗಿ ಬಂದಿದ್ದರೂ ವಿಶೇಷಾರ್ಥಪ್ರಕಾಶಿಕೆಯಲ್ಲಿ ವಿಶೇಷ ರೀತಿಯಲ್ಲಿ ಪೂರ್ತಿಗೊಂಡಿರುವುದು. ಇವೆರಡೂ ಗ್ರಂಥಗಳನ್ನು ಕೂಡಿಯೇ ಅಭ್ಯಾಸ ಮಾಡಿದವರಿಗೆ ವೀರಶೈವಷಟ್‌ಸ್ಥಲಜ್ಞಾನವು ಪರಿಪೂರ್ಣ-ವಾಗುವದರಲ್ಲಿ ಸಂದೇಹವಿಲ್ಲ. ಈ ಗ್ರಂಥವನ್ನು ಸೊಲ್ಲಾಪುರದ ಶ್ರೀಮಂತ ರಾ. ಬ. ವಾರದ ಮಲ್ಲಪ್ಪನವರು ಸುಮಾರು ಅರ್ಧ ಶತಮಾನದ ಹಿಂದೆ ಪ್ರಕಟಿಸಿ ಮಹೋಪಕಾರ ಮಾಡಿದರು.

ಪ್ರಸ್ತುತ ಈ ಗ್ರಂಥದ ಸಂಪಾದಕರೂ ವ್ಯಾಖ್ಯಾನಕಾರರೂ ಆದ ಆಸ್ಥಾನ ವಿದ್ವಾನ್ ಸರ್ವದರ್ಶನತೀರ್ಥ ಕಳಾಪ್ರಪೂರ್ಣ ಶಿವಾನುಭವಕವಿ ಪುಂಗವರಾದ ಏಳುಬೆಂಚೆಯ ಪಂಡಿತ ನಾಗೇಶಶಾಸ್ತ್ರಿಗಳು ತಮ್ಮ ಆಳವಾದ ಅನುಭವ, ಘನವಾದ ಪಾಂಡಿತ್ಯಬಲದಿಂದ ವಿಶೇಷಾರ್ಥಪ್ರಕಾಶಿಕೆಗೆ ವಿಸ್ತಾರವಾದ

ವ್ಯಾಖ್ಯಾನ ಬರೆದು ಕೃತಿಯನ್ನು ಶುದ್ಧವಾಗಿ ಸಂಪಾದಿಸಿದ್ದಾರೆ. ಶ್ರೀ ಶಿವಯೋಗೀಶ್ವರನು ಸಂಪಾದಕರಿಗೆ ಸದಾ ಉತ್ಸಾಹಶಕ್ತಿಯನ್ನಿತ್ತು ಇಂತಹ ಕಾರ್ಯವನ್ನು ಮುಂದುವರಿಸಲು ಪ್ರೇರಣೆಕೊಡಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥವನ್ನು ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯರಾದ ಶ್ರೀ ಬಿಳಗಿ ಬಂಧುಗಳು ಅತ್ಯಂತ ಮನೋಹರವಾಗಿ ಮುದ್ದಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರ ಸೇವೆ ಘನವಾದುದು. ಈ ಕೃತಿಯಲ್ಲಿ ತಪ್ಪುಗಳು ತಲೆದೋರದಂತೆ ನೋಡಿಕೊಂಡು ಒಮ್ಮನಸ್ಸಿನಿಂದ ಸಲಹೆಸೂಚನೆಗಳನ್ನು ಕೊಟ್ಟ ಶ್ರೀ ಶಿವಲಿಂಗಪ್ಪ ಬಸೆಟ್ಟೆಪ್ಪ ಹರಿಹರ ಇವರು ಸಾಹಿತ್ಯಸೇವೆ ಹಿರಿಯರು. ಅವರಿಗೂ ಮುದ್ರಣಾಲಯದವರಿಗೂ ಗ್ರಂಥಪ್ರಕಾಶನಕ್ಕೆ ಸಹಾಯಕರಾದ ಸಕಲರಿಗೂ ಶ್ರೀ ಶಿವಯೋಗೀಶ್ವರನು ಶ್ರೇಯಸ್ಸನ್ನುಂಟುಮಾಡಲೆಂದು ಹಾರೈಸುತ್ತೇವೆ

ಶ್ರೀ ಮುರುಘಾಮಠ
ಮೃತ್ಯುಂಜಯ ನಗರ
ಧಾರವಾಡ
೧೪, ಎಪ್ರಿಲ್ ೧೯೬೧

ಪ್ರಕಾಶಕರು

# ಪ್ರಸ್ತಾವನೆ

ವಿಶೇಷಾರ್ಥಪ್ರಕಾಶಿಕೆಯು ಶ್ರೀ ಮಾಯಿದೇವರ ಶಿವಾನುಭವಸೂತ್ರದ ಉತ್ತರಭಾಗವಾಗಿರುವುದು. ವಿಶೇಷಾರ್ಥಪ್ರಕಾಶಿಕೆಯ ಕೊನೆಯಲ್ಲಿ ಮಾಯಿ-ದೇವರೇ "ಇತಿ ಪೂರ್ವೋತ್ತರಭಾಗದ್ವಯ ಸಮುಚಿತಮೇತದಭಿಹಿತಂ ವಿಹಿತಂ ಶಿವ ಸಿದ್ಧಾಂತಂ ತಂತ್ರಂ ಶಿವಾನುಭವಸೂತ್ರಮತ್ರ ಸಂಪೂರ್ಣಂ" ಎಂಬ ಶ್ಲೋಕದಲ್ಲಿ ವಿಶೇಷಾರ್ಥಪ್ರಕಾಶಿಕೆಯು ಶಿವಾನುಭವಸೂತ್ರದ ಉತ್ತರಭಾಗವೆಂದು ಉಲ್ಲೇಖಿ-ಸಿರುವರು. ಶಿವಾನುಭವಸೂತ್ರಗ್ರಂಥದಲ್ಲಿ ಷಟ್‌ಸ್ಥಲವಿಷಯವು ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿರುವುದು. ಆದರೂ ಆ ಗ್ರಂಥದಲ್ಲಿ ಉಳಿದಿರುವ ವಿಶೇಷ ವಿಷಯದ ಪ್ರತಿಪಾದನವು ಉತ್ತರಭಾಗದಲ್ಲಿ ಬಂದಿರುವುದರಿಂದ ಆ ಭಾಗಕ್ಕೆ ವಿಶೇಷಾರ್ಥಪ್ರಕಾಶಿಕೆಯೆಂಬ ಹೆಸರಿಟ್ಟಂತೆ ತೋರುವುದು.

ವಿಶೇಷಾರ್ಥಪ್ರಕಾಶಿಕೆಯ ಪ್ರಥಮಾಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮವಾಚಕ-ವಾದ ಷಡಕ್ಷರಮಂತ್ರವನ್ನು ಅರ್ಥಯುಕ್ತವಾಗಿ, ಗುರುವು ಉಪದೇಶ ಮಾಡಿದ ಮೇಲೆ ಶಿವಾನುಭವಸೂತ್ರದಲ್ಲಿರುವ ಸರ್ವ ವಿಷಯವನ್ನು ಬೋಧಿಸಬೇಕೆಂದು ಮಾಯಿದೇವರು "ಶ್ರೀಮತ್ಪಂಚಾಕ್ಷರೀ ಮಂತ್ರಂ ಸತಾರಂ ತು ಷಡಕ್ಷರಂ ಷಡಂಗಲಿಂಗಸಂಯುಕ್ತಂ ಷಟ್‌ಸ್ಥಲಬ್ರಹ್ಮ ವರ್ಚಸಂ ॥ ನಾರ್ಥಂ ಸಮುಪ-ದಿಶ್ಯಾಥ ಶಿವಸಿದ್ಧಾಂತತಂತ್ರಕೇ ಶಿವಾನುಭವಸೂತ್ರೇಽಸ್ಮಿನ್ ಯದುಕ್ತಂ ತತ್ಸ-ಮಾದಿಶೇತ್" (ವಿಶೇಷಾರ್ಥಪ್ರಕಾಶಿಕೆಯ ಪ್ರಥಮಾಧಿಕರಣ ಸೂತ್ರ - ೨೫-೨೬) ಎಂಬೆರಡು ಸೂತ್ರಗಳಿಂದ ಹೇಳಿರುವುದನ್ನು ನೋಡಿದರೆ, ಮಾಯಿದೇವರ ಜೀವಿತ ಕಾಲದಲ್ಲಿಯೇ ವಿಶೇಷಾರ್ಥಪ್ರಕಾಶಿಕೆಯೆಂಬ ಉತ್ತರ ಭಾಗದಿಂದ ಕೂಡಿದ ಶಿವಾನುಭವಗ್ರಂಥವು ಗುರುಗಳ ಉಪದೇಶಗ್ರಂಥವಾಗಿ ಪರಿಣಮಿಸಿ, ಪ್ರಸಿದ್ಧಿ-ಯನ್ನು ಪಡೆದಿದ್ದಿತೆಂದು ಊಹಿಸಬಹುದಾಗಿದೆ. ವಿಶೇಷಾರ್ಥಪ್ರಕಾಶಿಕೆಯಲ್ಲಿ ಐದು ಅಧಿಕರಣಗಳಿರುವವು. ಪ್ರಥಮಾಧಿಕರಣದಲ್ಲಿ ಷಟ್‌ಸ್ಥಲಾತ್ಮಕವಾದ

ಷಟ್‌ಕಲಶಗಳನ್ನು ಪ್ರತಿಷ್ಠಿಸಿ ಗುರುಗಳು ಷಡಕ್ಷರಮಂತ್ರೋಪದೇಶವನ್ನು ಮಾಡಬೇಕೆಂಬ ವಿಶೇಷ ವಿಚಾರವಿರುವುದು. (ಈ ವಿಚಾರದಲ್ಲಿ ಬರುವ ಶಂಕೆಗೆ ಸಮಾಧಾನವು ಪ್ರಥಮಾಧಿಕರಣದ ಕೊನೆಯಲ್ಲಿ ಉಕ್ತವಾಗಿರುವುದು)

ದ್ವಿತೀಯಾಧಿಕರಣದಲ್ಲಿ ಶಿವಲಿಂಗಾರ್ಚನಕ್ರಮವು ಉಕ್ತವಾಗಿರುವುದು. ಈ ಅರ್ಚನಕ್ರಮದಲ್ಲಿ ಪೂಜೋಪಚಾರಗಳು ಒಟ್ಟು ಮೂವತ್ತಾರು ಇದ್ದು, ಅವು ಮೂವತ್ತಾರು ತತ್ತ್ವಮಯವಾಗಿರುವವೆಂದೂ, ಉಪಚಾರಯುಕ್ತವಾದ ಅರ್ಚನವು ಲಿಂಗಕ್ಕೆ ಅರ್ಪಿತವಾಗುವುದೆಂತಲೂ ಅರ್ಪಣದಿಂದ ದ್ರವ್ಯಶುದ್ಧಿಯೂ ತನ್ಮೂಲಕವಾಗಿ ಪ್ರಸಾದಸಿದ್ಧಿಯೂ ಆಗುವದೆಂತಲೂ ಪ್ರತಿಪಾದಿಸುವ ವಿಶೇಷ ವಿಚಾರವಿರುವುದು. ಮತ್ತು ಲಿಂಗಾರ್ಚನಕ್ರಮವು ಷಟ್‌ಸ್ಥಲಕ್ಕನುಸರಿಸಿ ನಿರೂಪಿತವಾಗಿರುವುದು.

ತೃತೀಯಾಧಿಕರಣದಲ್ಲಿ ಪ್ರಸಾದಸದ್ಭಾವವು ಉಕ್ತವಾಗಿರುವುದು. ಈ ಅಧಿಕರಣದಲ್ಲಿ ಪ್ರಸಾದಸ್ವರೂಪವು ವಿಸ್ತಾರವಾಗಿ ವಿವರಿಸಲ್ಪಟ್ಟಿರುವುದು. ತ್ರಿವಿಧಲಿಂಗಸ್ವರೂಪರಾದ ಗುರುಲಿಂಗಜಂಗಮರ ಉಪಾಸನೆಯಿಂದ ಪಡೆಯುವ ಫಲವೇ ಪ್ರಸಾದವಾಗಿರುವುದು. ವೀರಶೈವರು ಅರ್ಚಿಸುವ ಲಿಂಗವೇ ಪ್ರಸಾದವಾಗಿ ಪರಿಣಮಿಸಬೇಕು. ಇದನ್ನೇ ಮಾಯಿದೇವರು ಈ ಅಧಿಕರಣದಲ್ಲಿ "ಅರ್ಚನದ್ವಾರತೋ ಲಿಂಗಮರ್ಪಣದ್ವಾರತಃ ಸ್ವಯಂ। ಪ್ರಸಾದ ಇತಿ ಭಕ್ತ್ಯಾಯಮೇಕ ಏವೋಪಚರ್ಯತೇ" ಎಂಬ ಸೂತ್ರದಿಂದ ಹೇಳಿರುವರು. ಮತ್ತು ಪದಾರ್ಥಭಾವವಿಲೋಪವೇ ಶಿವಾರ್ಪಣವು. ಉಚ್ಛಿಷ್ಟಭಾವಾನುಪಪತ್ತಿಯೇ ಪ್ರಸಾದಗ್ರಹಣವೆಂಬುದನ್ನು ವಿವರಿಸಿ, ಪ್ರಸಾದಭಾವನೆಯ ತತ್ತ್ವವನ್ನು ನಿರೂಪಿಸಿರುವರು. ಹೀಗೆ ಈ ಅಧಿಕರಣದಲ್ಲಿ ಪ್ರಸಾದದ ವಿಶೇಷವಿಚಾರವು ಚರ್ಚಿಸಲ್ಪಟ್ಟಿರುವುದು.

ಚತುರ್ಥಾಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮಪುರಶ್ಚರಣಕ್ರಮವು ಉಕ್ತವಾಗಿರುವುದು. ಗುರೂಪದಿಷ್ಟವಾದ ಮಂತ್ರದ ಸಿದ್ಧಿಯು ಜಪ, ತರ್ಪಣ, ಹೋಮ, ಭೋಜನ, ಪೂಜನವೆಂಬ ಪಂಚಾಂಗಗಳಿಂದ ಕೂಡಿದ ಪುರಶ್ಚರಣಕ್ರಿಯೆಯಿಂದ ಪ್ರಾಪ್ತವಾಗುವುದೆಂಬ ವಿಶೇಷ ವಿಚಾರವು ಈ ಅಧಿಕರಣದಲ್ಲಿ ಬಂದಿರುವುದು.

ಪಂಚಮಾಧಿಕರಣದಲ್ಲಿ ದೇಹಾವಸಾನಕ್ರಮವು ಉಕ್ತವಾಗಿರುವುದು. ಈ ಅಧಿಕರಣದಲ್ಲಿ ವೀರಶೈವರ ದೇಹಾವಸಾನದಲ್ಲಿ ಮಾಡಬೇಕಾದ ಸಮಾಧಿಕ್ರಿಯೆ

ಯಲ್ಲಿ ಭಿನ್ನ ಕ್ರಮಗಳನ್ನು ವಿವರಿಸಿರುವುದಲ್ಲದೆ ಅವಸಾನಕಾಲದಲ್ಲಿ ಲಿಂಗದೊಡನೆ ದೇಹವನ್ನು ಸಮಾಧಿಯಲ್ಲಿರಿಸಬೇಕೆಂಬ ಪಕ್ಷದ ಮತ್ತು ಲಿಂಗವನ್ನು ಬಿಟ್ಟು ದೇಹವನ್ನು ಮಾತ್ರ ಸಮಾಧಿಯಲ್ಲಿರಿಸಬೇಕೆಂಬ ಪಕ್ಷದ ವಿಶೇಷವಿಚಾರವು ವಿಸ್ತೃತವಾಗಿ ವಿವರಿಸಲ್ಪಟ್ಟಿರುವುದು.

ವಿಶೇಷಾರ್ಥಪ್ರಕಾಶಿಕೆಯ ಕೆಲವು ಸೂತ್ರಗಳ ಅರ್ಥವು ಸ್ಫುಟವಾಗಿಲ್ಲ-ವೆಂತಲೂ ಕೆಲವೆಡೆಯಲ್ಲಿರುವ ಶ್ಲೋಕಗಳು ಪ್ರಕ್ಷಿಪ್ತವಾಗಿರಬಹುದೆಂತಲೂ ಗ್ರಂಥವಿಮರ್ಶಕರ ಅಭಿಪ್ರಾಯವಿರುವುದು. ಕಾಲಕಾಲಕ್ಕೆ ಈ ಗ್ರಂಥವನ್ನು ಪ್ರತಿಮಾಡಿಕೊಳ್ಳುವವರು ತಪ್ಪಾಗಿ ಬರೆದುಕೊಳ್ಳುತ್ತಿದ್ದುದೇ ಕೆಲವು ಸೂತ್ರಗಳ ಅರ್ಥವು ಅಸ್ಫುಟವಾಗುವುದಕ್ಕೂ ಕೆಲವೆಡೆಯಲ್ಲಿ ಸೂತ್ರಗಳು ಪ್ರಕ್ಷಿಪ್ತವಾಗಿರ-ಬಹುದೆಂದು ಊಹಿಸುವುದಕ್ಕೂ ಕಾರಣವೆಂದು ಕೆಲವರ ವಾದವಿರುವುದು. ಈ ವಾದಕ್ಕನುಸರಿಸಿ ವಿಶೇಷಾರ್ಥಪ್ರಕಾಶಿಕೆಯ ಪಾಠಾಂತರಗಳೂ ಇರುವದುಂಟು. ಈ ಗ್ರಂಥವನ್ನು ಮೊದಲು ಮೈಸೂರು ಯಜಮಾನ ವೀರಸಂಗಪ್ಪನವರೂ ಸೊಲ್ಲಾಪುರದ ರಾವಸಾಹೇಬ ವಾರದ ಮಲ್ಲಪ್ಪನವರೂ ಮುದ್ರಿಸಿ ಪ್ರಕಟಪಡಿಸಿ-ರುವರು. ವಾರದವರ ಮುದ್ರಿತ ಗ್ರಂಥವನ್ನನುಸರಿಸಿಯೇ ಈ ಗ್ರಂಥದ ಮುದ್ರಣವೂ ಇರುವುದು. ಒಂದೆರಡು ಕಡೆಯಲ್ಲಿ ಸೂತ್ರಾರ್ಥವು ಅಸ್ಫುಟ-ವಾಗಿರುವುದನ್ನು ಟೀಕೆಯಲ್ಲಿ ಸೂಚಿಸಲಾಗಿದೆ. ಪಾಠಾಂತರಗಳೆಲ್ಲವನ್ನೂ ಪರಿ-ಶೋಧಿಸಿ, ಶುದ್ಧಪ್ರತಿಯನ್ನು ಸಿದ್ಧಪಡಿಸಿ, ಅದಕ್ಕನುಸರಿಸಿ ದ್ವಿತೀಯ ಮುದ್ರಣ-ವನ್ನು ಮಾಡಬೇಕೆಂಬ ಸಂಕಲ್ಪವೂ ಇರುವುದು.

## ಗ್ರಂಥಕರ್ತೃಗಳು

ವಿಶೇಷಾರ್ಥಪ್ರಕಾಶಿಕೆಯ ಕರ್ತೃಗಳಾದ ಮೊಗ್ಗೆಯ ಮಾಯಿದೇವರಿಗೆ ಮಲಪ್ರಹಾರೀನದಿಯ ತೀರದಲ್ಲಿರುವ ಐಪುರಕ್ಷೇತ್ರವು ಜನ್ಮಸ್ಥಾನವಾಗಿದ್ದಿತು. ಅವರ ವಂಶಾದಿ ವಿಷಯವು ಶಿವಾನುಭವಸೂತ್ರದ ಪ್ರಥಮಾಧಿಕರಣದಲ್ಲಿ ವಿಸ್ತಾರ-ವಾಗಿ ನಿರೂಪಿತವಾಗಿದೆ. ವಿರೂಪಾಕ್ಷಪಂಡಿತನ (೧೫೮೪) ಚೆನ್ನಬಸವಪುರಾಣ-ದಲ್ಲಿರುವ :

ಎಲೆ ರಾಮ ಕೇಳಿನ್ನು ಸಕಲಾಗಮಂಗಳಿಗೆ
ನೆಲೆಯೆನಿಸಿ ಪ್ರೌಢನಿಂ ಪೂಜೆಯಂ ಕೊಂಡು ಷಟ್
ಸ್ಥಲಮಾರ್ಗಮಂ ಸಕಲಶಿವಭಕ್ತಸಂತತಿಗೆ ಕರತಲಾಮಲಕವಾಗಿ

ತಿಳಿವೊಲನುಭವಸೂತ್ರವಾದಿ ಶಾಸ್ತ್ರಂಗಳಂ
ಗೆಲವಿನಿಂ ಪೇಳ್ದು ನಿಜಶಿವಸಮಾಧಿಯಲಿ ಮಿಗೆ
ನಲವಿನಿಂದಲ್ಲಿ ಮೊಗ್ಗೆಯ ಮಾಯಿದೇವ ಪ್ರಭುವರನಿರದೆ ಮುಕ್ತನಹನು

ಎಂಬ ಪದ್ಯದಿಂದ ಮೊಗ್ಗೆಯ ಮಾಯಿದೇವರು ವಿಜಯನಗರದ ರಾಜನಾದ ಪ್ರೌಢರಾಯನ ಕಾಲದಲ್ಲಿದ್ದಂತೆ ತಿಳಿದಿರುವುದರಿಂದ ಇವರ ಕಾಲವು ಸುಮಾರು ಕ್ರಿ. ಶ. ೧೪೩೦ ಆಗಬಹುದೆಂದು ಕರ್ನಾಟಕ ಕವಿಚರಿತ್ರಕಾರರು ಬರೆದಿರುವರು.

ಶಾಂತಲಿಂಗದೇಶಿಕನ (೧೬೭೨) ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದಿಂದಲೂ ಸಿದ್ಧನಂಜೇಶನ (೧೬೫೦) ಪಾಲ್ಕುರಿಕೆ ಸೋಮೇಶ್ವರಪುರಾಣದಿಂದಲೂ ಮೊಗ್ಗೆಯ ಮಾಯಿದೇವರು ವೀರಶೈವರಿಗೆ ನರಕವಿಲ್ಲೆಂದು ವಿದ್ಯಾನಗರದಲ್ಲಿ ನೆಳಲಿಲ್ಲದ ಜಯಸ್ತಂಭವನ್ನು ನಿಲ್ಲಿಸಿದ್ದರಿಂದು ತಿಳಿದುಬರುವುದರಿಂದ ಅವರು ವೀರಶೈವನಿಜಾಚರಣದಿಂದುಂಟಾದ ಮಹಿಮೆಯನ್ನು ಚೆನ್ನಾಗಿ ಸಂಪಾದಿಸಿದ್ದರೆಂದು ವ್ಯಕ್ತವಾಗುವುದು. ಅವರಿಗೆ ಇದ್ದ "ಕುಮತವಿಭೇದೀ ಷಟ್‌ಸ್ಥಲಬ್ರಹ್ಮವಾದಿ" ಎಂಬ ಬಿರುದೇ ಅವರ ಅದ್ವಿತೀಯ ಪಾಂಡಿತ್ಯಕ್ಕೆ ನಿದರ್ಶನವಾಗಿರುವುದು. ಇವರು ಸಂಸ್ಕೃತದಲ್ಲಿ ವಿಶೇಷಾರ್ಥಪ್ರಕಾಶಿಕೆಯೆಂಬ ಉತ್ತರಭಾಗದಿಂದ ಕೂಡಿದ ಶಿವಾನುಭವಸೂತ್ರವೆಂಬ ಷಟ್‌ಸ್ಥಲಗ್ರಂಥವನ್ನು ಬರೆದಿರುವುದಲ್ಲದೆ, ಕನ್ನಡದಲ್ಲಿ ಪ್ರಭುಗೀತೆ. ಏಕೋತ್ತರ ಷಟ್‌ಸ್ಥಲ ಷಟ್ಪದಿ, ಷಟ್‌ಸ್ಥಲಗದ್ಯ, ಶತಕತ್ರಯ, ಮೊಗ್ಗೆಯ ಮಾಯಿದೇವರ ವಚನ ಎಂಬ ಗ್ರಂಥಗಳನ್ನು ಬರೆದಿರುವಂತೆ ಕವಿಚರಿತ್ರದಿಂದ ತಿಳಿದುಬರುತ್ತದೆ.

### ಭಾವಾರ್ಥಬೋಧಿನಿಯೆಂಬ ಟೀಕೆ

ಶ್ರೀ ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀ ಮುರುಘಾಮಠ, ಮೃತ್ಯುಂಜಯನಗರ ಧಾರವಾಡ ಇವರ ಆಶೀರ್ವಾದಪೂರ್ವಕವಾದ ಅಪ್ಪಣೆಯಂತೆ ಶಿವಾನುಭವಸೂತ್ರಕ್ಕೆ ಬರೆದಂತೆ ವಿಶೇಷಾರ್ಥಪ್ರಕಾಶಿಕೆಯೆಂಬ ಗ್ರಂಥಕ್ಕೂ ಭಾವಾರ್ಥಬೋಧಿನಿಯೆಂಬ ಟೀಕೆಯನ್ನು ಬರೆಯಲಾಗಿದೆ. ಈ ಟೀಕೆಯಲ್ಲಿರುವ ಗುಣದೋಷವಿಮರ್ಶನವು ವೀರಶೈವತತ್ತ್ವಜ್ಞರದಾಗಿರುವುದೆಂದು ನಂಬಿರುವೆನು.

ವೈ. ನಾಗೇಶಶಾಸ್ತ್ರಿಗಳು

# ಅನುಕ್ರಮಣಿಕೆ



( ಒಟ್ಟು ಶ್ಲೋಕಗಳು - ೪೬೭ )

॥ ಶ್ರೀಗುರುಲಿಂಗ ಜಂಗಮೇಭ್ಯೋ ನಮಃ ॥

ಮಾಯಿದೇವಸ್ಯ

# ವಿಶೇಷಾರ್ಥಪ್ರಕಾಶಿಕಾಯಾಂ

## ಪ್ರಥಮಾಧಿಕರಣೇ ಬ್ರಹ್ಮೋಪದೇಶವಿಧಿ

ಶ್ರೀಮದ್ವೈಪುರಸೋಮೇಶಲಿಂಗಾಯಾಲಿಂಗರೂಪಿಣೇ
ಲಿಂಗಾಂಗೈಕ್ಯಸ್ವರೂಪಾಯ ನಮಸ್ತೇ ಲಿಂಗಮೂರ್ತಯೇ ೧

---

ಭಾವಾರ್ಥಬೋಧಿನಿ ಎಂಬ ಕನ್ನಡ ಟೀಕೆ

**ಟೀಕಾಕಾರನ ಮಂಗಳವು :**

ಕಂದ ॥ ಪರಶಿವಕಮಲಾಂತರದೊಳ್
ಪರಿಶೋಭಿಪ ದೃಕ್ಕ್ರಿಯಾಸುಮಧುವಂ ಪೀರ್ದಾಂ
ನೆರೆಸುಖಿಪ ಭೃಂಗಭಾವವ
ಕರುಣಿಸಿದಾ ಗುರುಚರರ್ಗೆ ವಂದಿಪೆನೊಲವಿಂ ॥

**ಸೂತ್ರಕಾರನ ಮಂಗಳವು**

ಶ್ರೀ ಮಾಯಿದೇವನು ತನ್ನ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕೆಂತಲೂ ಶಿಷ್ಯಶಿಕ್ಷಾರ್ಥವಾಗಿಯೂ ಗ್ರಂಥಾದಿಯಲ್ಲಿ ಮೂರು ಸೂತ್ರಗಳಿಂದ ಮಂಗಳವನ್ನಾಚರಿಸುವನು :

ಸೂ. ೧: ಶ್ರೀಮದ್ವೈಪುರಸೋಮೇಶ್ವರನೆ, ಅಲಿಂಗರೂಪಿಯು (ಅವ್ಯಕ್ತನು) ಆದರೂ ಭಕ್ತೋದ್ಧಾರಕ್ಕಾಗಿ ಲಿಂಗಮೂರ್ತಿಯೂ. ಲಿಂಗಾಂಗಸಾಮರಸ್ಯ ಸ್ವರೂಪನೂ ಆಗಿ ವ್ಯಕ್ತನಾಗಿರುವ ನಿನಗೆ ನಮಸ್ಕಾರವು.

ನಮಃ ಶಬ್ದ ಉಮಾ ಸಾಕ್ಷಾಚ್ಛಿವಶಬ್ದಃ ಶಿವಃ ಸ್ವಯಂ
ಅಯಶಬ್ದಸ್ತಯೋರ್ಯೋಗಃ ಸೋಮಂ ತಂ ಸಮುಪಾಸ್ಮಹೇ ೨

ಶಿವೋ ಲಿಂಗಮುಮೈವಾಂಗಮನಯಾ ಸಹಿತಸ್ತ್ವಯಂ
ಸೋಮಃ ಸಂಬಂಧ ಇತ್ಯೇವಂ ಪದತ್ರಯಮುಪಾಸ್ಮಹೇ ೩

---

ಸೂ. ೨. 'ನಮಃಶಿವಾಯ' ಎಂಬ ಮಂತ್ರದಲ್ಲಿ 'ನಮಃ' ಶಬ್ದವೇ ಉಮೆಯೂ, 'ಶಿವ' ಶಬ್ದವೇ ಶಿವನೂ, 'ಅಯ' ಶಬ್ದವೇ ಆ ಉಮಾ ಶಿವರ ಸಂಯೋಗವೂ, ಆಗಿರುವುದರಿಂದ ಆ ಪಂಚಾಕ್ಷರ ಮಂತ್ರಾತ್ಮಕ ವಾದ ಸೋಮ (ಉಮಾಸಹಿತಶಿವ) ತತ್ತ್ವವನ್ನು ಉಪಾಸಿಸುತ್ತಿರುವೆನು.

ಸೂತ್ರ. ೩. 'ಲಿಂಗಾಂಗಸಂಬಂಧ' ವೆಂಬ ಪದತ್ರಯದಲ್ಲಿ ಲಿಂಗವೇ ಶಿವನು, ಅಂಗವೇ ಉಮೆಯು, ಉಮಾಸಹಿತವಾದ ಸೋಮಪದವೇ ಲಿಂಗಾಂಗಗಳ ಸಂಬಂಧವನ್ನು ಬೋಧಿಸುತ್ತಿರುವುದು. ಆದುದರಿಂದ ಲಿಂಗಾಂಗಸಂಬಂಧಪದತ್ರಯಾತ್ಮಕವಾದ ಸೋಮನನ್ನು ಉಪಾಸಿಸುತ್ತಿರುವೆನು.

ವಿಚಾರ

ಗ್ರಂಥಕಾರನು ಮಂಗಳದಲ್ಲಿ ಷಟ್‌ಸ್ಥಲಸಿದ್ಧಾಂತಕ್ಕನುಸರಿಸಿ, ಅವ್ಯಕ್ತನಾಗಿರುವ ಶಿವನು ಭಕ್ತೋದ್ಧಾರಕ್ಕಾಗಿ ಲಿಂಗಾಂಗರೂಪದಿಂದ ವ್ಯಕ್ತನಾಗಿರುವನೆಂತಲೂ, ಲಿಂಗಾಂಗಸಾಮರಸ್ಯವೇ ಷಟ್‌ಸ್ಥಲಮಾರ್ಗದ ಪರಮ ಪ್ರಯೋಜನವೆಂತಲೂ ವ್ಯಕ್ತಗೊಳಿಸಿರುವನು. ಮತ್ತು ವೀರಶೈವರ ಮುಖ್ಯ ಮಂತ್ರವಾದ ಪಂಚಾಕ್ಷರಿಯಲ್ಲಿ ಲಿಂಗಾಂಗಸಾಮರಸ್ಯಪರವಾದರ್ಥವಿರುವುದೆಂದು ಎರಡನೆಯ ಸೂತ್ರದಿಂದ ಪ್ರತಿಪಾದಿಸಿರುವನು. ಮೂರನೆಯ ಸೂತ್ರದಲ್ಲಿ ಅವ್ಯಕ್ತವಾದ ಶಿವತತ್ತ್ವವು ತದ್ಗತವಾದ ಚಿಚ್ಛಕ್ತಿಯಿಂದ ಲಿಂಗರೂಪದಿಂದ ವ್ಯಕ್ತವಾಗಿ, ಆ ಶಕ್ತಿಯನ್ನೇ ತನಗಂಗವಾಗಿ ಅಂಗೀಕರಿಸಿರುವುದು - ಎಂದರೆ - ಶಕ್ತಿವಿಶಿಷ್ಟವಾಗಿ ಕಂಗೊಳಿಸುವುದೆಂಬುದನ್ನು ನಿರೂಪಿಸಿ, ಷಟ್‌ಸ್ಥಲಸಿದ್ಧಾಂತವು ಶಕ್ತಿವಿಶಿಷ್ಟ ಶಿವಾದ್ವೈತವೆಂಬುದನ್ನು ಸೂಚಿಸಿರುವನು.

ಇತಃ ಪರಃ ಪ್ರವಕ್ಷ್ಯಾಮಿ ವಿಶೇಷಾರ್ಥಪ್ರಕಾಶಕಂ
ಶಿವಸಿದ್ಧಾಂತ ತಂತ್ರೋಕ್ತಂ ಸಂವಾದಂ ಗುರುಶಿಷ್ಯಯೋಃ ೪

ತತ್ರಾದೌ ಷಟ್‌ಸ್ಥಲಬ್ರಹ್ಮೋಪದೇಶವಿಧಿರುಚ್ಯತೇ
ದ್ವಿತಿಯೇ ಕಥ್ಯತೇ ಸಮ್ಯಕ್ ಶಿವಲಿಂಗಾರ್ಚನಕ್ರಮಃ ೫

ಶ್ರೀಮತ್ಪ್ರಸಾದಸದ್ಭಾವಸ್ತೃತಿಯೇ ಪರಿಗೀಯತೇ
ಚತುರ್ಥಂ ಷಟ್‌ಸ್ಥಲಬ್ರಹ್ಮಪುರಶ್ಚರಣಮುಚ್ಯತೇ ೬

ಅವಸಾನವಿಧಾನಂ ಯತ್ಪಂಚಮೇ ತು ಪ್ರಕೀರ್ತ್ಯತೇ
ಏವಂ ಪಂಚಾಧಿಕರಣಂ ವಿಶೇಷಾರ್ಥ ಪ್ರಕಾಶಕಂ ೭

ಶಿವಾನುಭವಸೂತ್ರೋತ್ಥಂ ಕ್ರಮಾದೇತನ್ನಿರೂಪ್ಯತೇ
ಶಿವಾನುಭವಿನಃ ಸಂತಃ ಶೃತ್ವಾ ನಂದಂತು ಸಂತತಂ ೮

---

ಐದು ಸೂತ್ರಗಳಿಂದ ಗ್ರಂಥಗತ ವಿಷಯನಿರೂಪಣೆಯನ್ನು ಮಾಡುತ್ತಿರು-ವನು :

ಸೂ. ೪-೮. ಇನ್ನು ಮುಂದೆ ಶಿವಸಿದ್ಧಾಂತ ತಂತ್ರೋಕ್ತವಾದ ವಿಶೇ-ಷಾರ್ಥಪ್ರಕಾಶಿಕೆಯನ್ನು, ಗುರು-ಶಿಷ್ಯರ ಸಂವಾದರೂಪವಾಗಿ ಹೇಳುವೆನು. ಈ ಗ್ರಂಥದ ಒಂದನೆಯ ಅಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮೋಪದೇಶ-ವಿಧಿಯೂ, ಎರಡನೆಯ ಅಧಿಕರಣದಲ್ಲಿ ಶಿವಲಿಂಗಾರ್ಚನಕ್ರಮವೂ, ಮೂರನೆಯ ಅಧಿಕರಣದಲ್ಲಿ ಶ್ರೀಮತ್ಪ್ರಸಾದಸದ್ಭಾವವೂ, ನಾಲ್ಕನೆಯ ಅಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮಪುರಶ್ಚರಣವೂ, ಐದನೆಯ ಅಧಿಕರಣದಲ್ಲಿ ಅವಸಾನ ( ಲಿಂಗೈಕ್ಯ ) ವಿಧಾನವೂ ವಿವರಿಸಲಾಗುವುದು. ಹೀಗೆ ವಿಶೇ-ಷಾರ್ಥಪ್ರಕಾಶಿಕೆಯು ಐದು ಅಧಿಕರಣಗಳಿಂದ ಕೂಡಿರುವುದು. ಇದು ಶಿವಾನುಭವಸೂತ್ರದ ಮುಂದಿನ ಭಾಗವಾಗಿರುವುದು. ಈ ಗ್ರಂಥದ ವಿಷಯವನ್ನು ಕೇಳಿ, ಶಿವಾನುಭವಿಗಳು ಸಂತುಷ್ಟರಾಗಲಿ.

## ಷಟ್‌ಸ್ಥಲಬ್ರಹ್ಮೋಪದೇಶವಿಧಿಃ

ಗುರುಃ

ಅಥಾತಃ ಷಟ್‌ಸ್ಥಲ ಬ್ರಹ್ಮೋಪದೇಶವಿಧಿಂ ವರಂ
ಪ್ರವಕ್ಷ್ಯಾಮಿ ಪಿಶೇಷೇಣ ಶಿವಸಿದ್ಧಾಂತ ತಂತ್ರಜಂ ೯

ಪುರಾ ಯಥೋಪದಿಶ್ಯೋಕ್ತಂ ಷಟ್‌ಸ್ಥಲಬ್ರಹ್ಮಶಂಭುನಾ
ಷಣ್ಮುಖಾಯೋಪದಿಷ್ಟಾರ್ಥಂ ತಥೈವೇಹಾಧುನೋಚ್ಯತೇ ೧೦

ಷಡಧ್ವಶುದ್ಧಿರ್ಯತ್ರೋಕ್ತಾ ಷಟ್‌ಸ್ಥಲಬ್ರಹ್ಮಶಾಂಭವೇ
ಉಪದೇಶೇ ಷಡಧ್ವಾನೋ ಮಂತ್ರಾಧ್ವಾದ್ಯಾಶ್ಚ ವೈ ಕ್ರಮಾತ್ ೧೧

ಮಂತ್ರಾಧ್ವಾ ಚ ಪದಾಧ್ವಾ ಚ ವರ್ಣಾಧ್ವಾ ಚೇತಿ ಶಬ್ದತಃ
ಭುವನಾಧ್ವಾ ಚ ತತ್ತ್ವಾಧ್ವಾ ಕಲಾಧ್ವಾ ಚೇತಿ ತೇ ಸ್ಮೃತಾಃ ೧೨

---

### ಷಟ್‌ಸ್ಥಲಬ್ರಹ್ಮೋಪದೇಶವಿಧಿಯು

ಸೂ. ೯. ಗುರು - ಅಧಿಕರಣಗತವಿಷಯನಿರೂಪಣಾನಂತರದಲ್ಲಿ ಶಿವ-ಸಿದ್ಧಾಂತತಂತ್ರಗತವಾದ ಮತ್ತು ಶ್ರೇಷ್ಠವಾದ ಷಟ್‌ಸ್ಥಲಬ್ರಹ್ಮೋಪದೇಶ-ವಿಧಿಯನ್ನು ಹೇಳುವೆನು.

ಸೂ. ೧೦. ಪೂರ್ವದಲ್ಲಿ ಷಟ್‌ಸ್ಥಲಬ್ರಹ್ಮರೂಪಿಯಾದ ಶಂಭುವಿನಿಂದ ಷಣ್ಮುಖನಿಗೆ ಉಪದೇಶಿಸಲ್ಪಟ್ಟ ಉಪದೇಶಾರ್ಥವನ್ನೇ ಈಗ ಹೇಳುವೆನು.

ಗುರುವು ಉಪದೇಶವಿಧಿಯಲ್ಲಿ ಷಡಧ್ವಶುದ್ಧಿಯನ್ನು ಮಾಡಬೇಕಾದುದ-ರಿಂದ ಆ ಷಡಧ್ವಗಳನ್ನು ಹೇಳುವೆನು :

ಸೂ. ೧೧. ಷಟ್‌ಸ್ಥಲಬ್ರಹ್ಮಶಂಭು ಸಂಬಂಧವಾದ ಉಪದೇಶದಲ್ಲಿ ಷಡಧ್ವಶುದ್ಧಿಯು ಉಕ್ತವಾಗಿರುವುದು. ಆ ಅಧ್ವಗಳು ಮಂತ್ರಾಧ್ವಾದಿ-ಯಾಗಿ ಆರು ಇರುವವು.

ಸೂ. ೧೨. ಮಂತ್ರಾಧ್ವ, ಪದಾಧ್ವ, ವರ್ಣಾಧ್ವವೆಂದು (ಮೂರು ಶಬ್ದಾಧ್ವ ಗಳೂ) ಭುವನಾಧ್ವ, ತತ್ತ್ವಾಧ್ವ, ಕಲಾಧ್ವವೆಂದು (ಮೂರು ಅರ್ಥಾಧ್ವ ಗಳೂ) ಕೂಡಿ ಆರು ಅಧ್ವಗಳಿರುವವು.

ಕೃತ್ವಾ ಸರ್ವಂ ಯಥಾಕಾಲಂ ಯಥಾಶಕ್ತಿ ಯಥಾವಿಧಿ
ಯಥೋಚಿತಂ ವಿಧಾತವ್ಯಂ ತತ್ರ ಭಕ್ತ್ಯಾ ಸಮಾಹಿತಃ ೧೩

ಪಂಚಮುದ್ರಾಂ ಸಮುದ್ಧೃತ್ಯ ಪಂಚಕೋಣಸಮನ್ವಿತಾಂ
ಕಲಾಭಿಃ ಪಂಚಭಿರ್ವ್ಯಾಪ್ತಾಂ ಪಂಚಶಕ್ತಿ ಮಯೀಂ ತಥಾ
ಪಂಚವರ್ಣೈರವರ್ಣೈರ್ವಾ ತಂಡುಲೈರ್ಮಂಡಲಂ ಬಹಿಃ ೧೪

ತದ್ಬಹಿಶ್ಚತುರಸ್ರಂ ತು ಪರಿಸ್ತರಣರೂಪತಃ
ತದಂತಃ ಕರ್ಣಿಕಾಯುಕ್ತಂ ಪದ್ಮಂ ವಲಯಿತಂ ಶುಭಂ ೧೫

ತನ್ಮಧ್ಯೇ ಪ್ರಣವಂ ಸಾಕ್ಷಾತ್ಪಂಚಬ್ರಹ್ಮಾತ್ಮಕಂ ಶಿವಂ
ಪ್ರತ್ಯೇಕಂ ಪಂಚಕೋಣೇಷು ಪಂಚಾಕ್ಷರಮನುಕ್ರಮಾತ್ ೧೬

ನಕಾರಾದಿಯಕಾರಾಂತಂ ಸದ್ಯೋ ಜಾತಾದಿಪಂಚಕಂ
ಮುದ್ರಿತಾನಿ ಯಥಾ ಪಂಚ ಪಂಚ ತತ್ತ್ವಾನ್ಯಶೇಷತಃ ೧೭

---

ಸೂ. ೧೩. ಉಪದೇಶಕ್ಕೆ ತಕ್ಕ ಕಾಲ, ಶಕ್ತಿ, ವಿಧಿ ಇವುಗಳನ್ನನುಸರಿಸಿ, ಭಕ್ತಿಯುಕ್ತವಾಗಿ ಯಥೋಚಿತ ವಿಧಾನವನ್ನು ನೆರವೇರಿಸಬೇಕು.

ಸೂ. ೧೪ ರಿಂದ ೧೮. ಐದು ಬಣ್ಣದ ಅಥವಾ ಬಣ್ಣವಿಲ್ಲದ ತಂಡುಲದಿಂದ ಐದು ಮೂಲೆಗಳುಳ್ಳ ಪಂಚಕಲೆಗಳಿಂದಲೂ, ಪಂಚಶಕ್ತಿಗಳಿಂದಲೂ ವ್ಯಾಪ್ತವಾದ ಪಂಚಮುದ್ರೆಯ ಯಂತ್ರವನ್ನು ರಚಿಸಬೇಕು. ಅದರ ಸುತ್ತಲೂ ಮಂಡಲಾಕಾರವಿರಬೇಕು. ಆ ಮಂಡಲವು ಪರಿಸ್ತರಣರೂಪವಾದ ಚೌಕದ ಮಧ್ಯದಲ್ಲಿರಬೇಕು. ಆ ಚೌಕದಲ್ಲಿ ಮೊದಲೇ ದುಂಡಾಗಿ ಕರ್ಣಿಕಾಯುಕ್ತವಾದ ಕಮಲವನ್ನು ರಚಿಸಿರಬೇಕು. ಈ ರೀತಿಯಾಗಿ ರಚಿಸಿದ ಯಂತ್ರದ ಮಧ್ಯದಲ್ಲಿ ಪಂಚಬ್ರಹ್ಮಾತ್ಮಕವೂ ಶಿವಸ್ವರೂಪವೂ ಆದ ಓಂಕಾರಪ್ರಣವವನ್ನು ರಚಿಸಬೇಕು. ಆ ಯಂತ್ರದ ಐದು ಮೂಲೆಗಳಲ್ಲಿ ಕ್ರಮವಾಗಿ, ಸದ್ಯೋಜ್ಯಾತಾದಿ ಪಂಚಬ್ರಹ್ಮಮಯವಾದ ನಕಾರಾದಿ ಯಕಾರಾಂತವಾದ ಪಂಚಾಕ್ಷರಗಳನ್ನು ಬರೆಯಬೇಕು. ಮತ್ತು ಆ

ಮುದ್ರಯಾ ಸಾ ಸಮಾಖ್ಯಾತಾ ಪಂಚಮುದ್ರೇತಿ ಶಾಂಭವೀ
ಏಷಾ ಪಂಚಮಹಾಮುದ್ರಾ ಶಿವಯಂತ್ರಮಿತೀರಿತಾ ೧೮

ಸಮಂತ್ರೇ ವಿಧಿವತ್ತತ್ರ ಪೂತಾನ್ ಪೂರ್ಣಾನ್ ಸುಶೋಭನಾನ್
ಆಚಾರಲಿಂಗ ಭಕ್ತಾಂಗಪೂರ್ವಕಾನ್ ಷಟ್‌ಸ್ಥಲಾತ್ಮಕಾನ್ ೧೯

ಕಲಶಾನ್ ಷಟ್ ಸಮಾದಾಯ ಪಂಚಕೋಣೇಷು ಪಂಚವೈ
ಏಕಂ ಮಧ್ಯೇ ಪ್ರತಿಷ್ಠಾಪ್ಯ ಕ್ರಮೇಣ ವಿಧಿನಾ ತತಃ ೨೦

ಸೂತ್ರೈಃ ಪವಿತ್ರೈರಾವೃತ್ಯ ಕಲಶಾನ್ ಪ್ರಣವಾದಿಕಾನ್
ತತ್ತನ್ಮುಖೇ ಸನ್ನಿಧಾಯ ಕುಶದೂರ್ವಾಮ್ರ ಪಲ್ಲವಾನ್ ೨೧

ಅರ್ಚಯಿತ್ವಾ ವಿಧಾನೇನ ಸಮಂತ್ರೇಣ ಯಥಾಕ್ರಮಂ
ತತಃ ಸ್ತುತ್ವಾ ಚ ನತ್ವಾ ಚ ಷಡೇತಾನನುಪೂರ್ವಶಃ ೨೨

---

ಪಂಚಕೋಣಗಳು ಪಂಚತತ್ತ್ವಮಯವಾದವುಗಳೆಂದು ಭಾವಿಸಬೇಕು. ಈ ರೀತಿಯಾಗಿ ರಚಿತವಾದ ಪಂಚಮಹಾಮುದ್ರೆಯೆ ಶಿವಯಂತ್ರವೆನಿಸಿಕೊಳ್ಳುವುದು.

ಸೂ. ೧೯ ರಿಂದ ೨೨. ಮಂತ್ರಮಯವಾದ ಶಿವಯಂತ್ರಸ್ಥಾನದಲ್ಲಿ ಪವಿತ್ರವಾದ ಮತ್ತು ಜಲಪೂರ್ಣವಾದ ಆಚಾರಲಿಂಗ ಭಕ್ತಾಂಗಪೂರ್ವಕವಾದ ಷಟ್‌ಸ್ಥಲಾತ್ಮಕವಾದ ಆರು ಕಲಶಗಳನ್ನು ವಿಧಿಗನುಸರಿಸಿ, ಐದು ಮೂಲೆಗಳಲ್ಲಿ ಐದು ಕಲಶಗಳನ್ನೂ ಮಧ್ಯದಲ್ಲಿ ಒಂದು ಕಲಶವನ್ನೂ ಪ್ರತಿಷ್ಠೆಗೈಯ್ಯಬೇಕು. ಮತ್ತು ಪವಿತ್ರಸೂತ್ರವನ್ನು ಮಂತ್ರಾತ್ಮಕವಾದ ಆ ಕಲಶಗಳಿಗೆ ಸುತ್ತಬೇಕು. ಕಲಶಮುಖಗಳಲ್ಲಿ ದರ್ಭೆ, ಗರಿಕೆ, ಮಾವಿನ ತಳಿರು ಇವುಗಳನ್ನಿಟ್ಟು ಅಲಂಕರಿಸಬೇಕು. ಆ ಮೇಲೆ ಮಂತ್ರಪೂರ್ವಕ ವಿಧಾನದಿಂದ ಕ್ರಮವಾಗಿ ಷಟ್‌ಕಲಶಗಳನ್ನು ಪೂಜಿಸಿ, ನುತಿಸಿ, ನಮುಸ್ಕರಿಸಬೇಕು.

ಉದಙ್ಮುಖೋ ಗುರುಃ ಪ್ರತ್ಯಙ್ಮುಖಂ ಶಿಷ್ಯಂ ನಿಯಮ್ಯ ಚ
ಅಭಿಷೇಕಂ ತತಃ ಕೃತ್ವಾ ಕಲಶಸ್ಥಾಂಬುಭಿಃ ಶಿವೈಃ ೨೩

ಶಕ್ತಿಪಾತಂ ವಿಧಾಯಾಥ ಸಮ್ಯಗ್ ಜ್ಞಾನಾಭಿವೃದ್ಧಯೇ
ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯವಿನಿ ವೃತ್ತಯೇ ೨೪

ತೇಷಾಂ ತಲ್ಲಿಂಗ ಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ವಿಧೌ ೨೫

ಶ್ರೀಮತ್ಪಂಚಾಕ್ಷರೀಮಂತ್ರಂ ಸತಾರಂತು ಷಡಕ್ಷರಂ
ಷಡಂಗಲಿಂಗಸಂಯುಕ್ತಂ ಷಟ್‌ಸ್ಥಲಬ್ರಹ್ಮವರ್ಚಸಂ ೨೬

---

ಸೂ. ೨೩. ಗುರುವು ಉತ್ತರಮುಖವಾಗಿ ಕುಳಿತುಕೊಂಡು, ಶಿಷ್ಯನನ್ನು ಪಶ್ಚಿಮಮುಖವಾಗಿ ಕುಳ್ಳಿರಿಸಿ, ಆ ಮೇಲೆ, ಶಿವಮಯವಾದ ಕಲಶೋದಕದಿಂದ ಶಿಷ್ಯನಿಗೆ ಅಭಿಷೇಕವನ್ನು ಮಾಡಬೇಕು.

ಸೂ. ೨೪ - ೨೫. ಅನಂತರದಲ್ಲಿ ಗುರುವು ಶಿಷ್ಯನಿಗೆ ಜ್ಞಾನಾಭಿವೃದ್ಧಿಗಾಗಿ ಶಕ್ತಿಪಾತವನ್ನು (ಅನುಗ್ರಹವನ್ನು) ಮಾಡಬೇಕು. ಪುನರ್ಜನ್ಮವನ್ನು ದೂರ ಮಾಡುವ ಶಕ್ತಿಪಾತವನ್ನು ಪಡೆದ ಶಿಷ್ಯರಿಗೆ ಮುಕ್ತಿಯಲ್ಲಿ ಉತ್ಸುಕತೆಯೂ, ಜನನಮರಣಗಳಲ್ಲಿ ದ್ವೇಷವೂ, ಶಿವಭಕ್ತರಲ್ಲಿ ಭಕ್ತಿಯೂ ಶಿವಭಕ್ತಿವಿಧಾಯಕ ಧರ್ಮದಲ್ಲಿ ಶ್ರದ್ಧೆಯೂ ಉಂಟಾಗುವುದು. ಹೀಗಾಗುವುದೇ ಶಕ್ತಿಪಾತ-ವನ್ನು ಪಡೆದವರ ಚಿಹ್ನವಾಗಿರುವುದು.

ಸೂ. ೨೬ ರಿಂದ ೨೭. ಆಮೇಲೆ ಗುರುವು ಓಂಕಾರದಿಂದ ಕೂಡಿದಾಗ ಷಡಕ್ಷರವೂ, ಷಡಂಗಲಿಂಗಸಂಯುಕ್ತವೂ, ಷಟ್‌ಸ್ಥಲಬ್ರಹ್ಮತೇಜಸ್ಸು-ಳ್ಳುದೂ ಆಗುವ ಶ್ರೀಮತ್ಪಂಚಾಕ್ಷರೀಮಂತ್ರವನ್ನು ಮಂತ್ರಾರ್ಥಪೂರ್ವಕವಾಗಿ ಶಿಷ್ಯನಿಗೆ ಉಪದೇಶಿಸಬೇಕು. ಮತ್ತು ಶಿವಸಿದ್ಧಾಂತತಂತ್ರಕವೆಂಬ ಶಿವಾನುಭವಸೂತ್ರದಲ್ಲಿ ಉಕ್ತವಾದ ಸರ್ವವಿಷಯವನ್ನೂ ಬೋಧಿಸಬೇಕು.

ಸಾರ್ಥಂ ಸಮುಪದಿಶ್ಯಾಥ ಶಿವಸಿದ್ಧಾಂತ ತಂತ್ರಕೇ
ಶಿವಾನುಭವಸೂತ್ರೇಽಸ್ಮಿನ್ ಯದುಕ್ತಂ ತತ್ಸಮಾದಿಶೇತ್ ೨೭

ದ್ರವ್ಯ ಮಂತ್ರಕ್ರಿಯಾಯೋಗೋ ಯತ್ರ ಯತ್ರ ಯಥಾ ಯಥಾ
ತಥಾ ತಥಾ ತತ್ರ ತತ್ರ ಸರ್ವಮಚ್ಛಿದ್ರಮಾಚರೇತ್ ೨೮

ಇತ್ಯೇವಂ ಷಟ್‌ಸ್ಥಲಬ್ರಹ್ಮೋಪದೇಶವಿಧಿರುತ್ತರಃ
ಸಾರಾತ್ಸಾರತರಃ ಪ್ರೋಕ್ತಃ ಸಂಕ್ಷಿಪ್ಯ ಮಹದರ್ಥತಃ ೨೯

ಶಿಷ್ಯಃ

ನಮಃ ಶಿವಾಯ ಸೋಮಾಯ ಸತಾರಾಯ ಷಡಾತ್ಮನೇ
ಸ್ವಯಂ ಜ್ಯೋತಿಃ ಪ್ರಕಾಶಾಯ ಸ್ವತಂತ್ರಾಯ ನಮೋ ನಮಃ ೩೦

---

ಸೂ. ೨೮. ಮೇಲೆ ಹೇಳಿದಂತೆ, ಯಾವ ಯಾವ ಸ್ಥಾನದಲ್ಲಿ ಹೇಗೆ ದ್ರವ್ಯ, ಮಂತ್ರ, ಕ್ರಿಯೆ ಇವುಗಳ ಯೋಗವಿರುವುದೋ; ಆ ಪ್ರಕಾರವಾಗಿ ಆ ಸ್ಥಲಗಳಲ್ಲಿ ವಿಧಿಗೆ ನ್ಯೂನತೆಯುಂಟಾಗದಂತೆ ಬ್ರಹ್ಮೋಪದೇಶವಿಧಿಯನ್ನು ಪೂರ್ಣಗೊಳಿಸಬೇಕು.

ಸೂ. ೨೯. ಈ ಪ್ರಕಾರವಾಗಿ ಸಾರತರವಾದ ಷಟ್‌ಸ್ಥಲಬ್ರಹ್ಮೋಪದೇಶವಿಧಿಯು ಮಹತ್ತರ ಅರ್ಥದಿಂದ ಕೂಡಿದ್ದರೂ ಸಂಕ್ಷಿಪ್ತವಾಗಿ ಹೇಳಲ್ಪಟ್ಟಿರುವುದು.

ಸೂ. ೩೦. ಶಿಷ್ಯ-ಓಂಕಾರಸಹಿತ ಷಡಕ್ಷರಸ್ವರೂಪನೂ, ಸ್ವಯಂಜ್ಯೋತಿಃ ಪ್ರಕಾಶನೂ, ಸ್ವತಂತ್ರನೂ ಆದ ಉಮಾಸಹಿತ ಶಿವನಿಗೆ ನಮಸ್ಕಾರವು. ( ಇದು ಶಿಷ್ಯನು ಮಾಡಿದ ಸ್ತೋತ್ರವಾಗಿರುವುದು. )

ವಿಚಾರ

ಬ್ರಹ್ಮೋಪದೇಶವಿಧಿಯಲ್ಲಿ ಮುಖ್ಯವಾಗಿ ಚರ್ಚಾಸ್ಪದ ವಿಷಯಗಳೆರಡಿರುವವು. ಬ್ರಹ್ಮೋಪದೇಶವಿಧಿಯನ್ನು ಯಾವ ಕಾಲದಲ್ಲಿ ಮಾಡಬೇಕೆಂಬುದೊಂದು. ಈ ವಿಧಿಯಲ್ಲಿ ಸ್ಥಾಪಿಸುವ ಷಟ್‌ಸ್ಥಲಾತ್ಮಕ

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೩೧

ಇತಿ ಶ್ರೀ ಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ಷಟ್‌ಸ್ಥಲಬ್ರಹ್ಮೋಪದೇಶವಿಧಿರ್ನಾಮ
ಪ್ರಥಮಾಧಿಕರಣಂ
ಸಂಪೂರ್ಣಂ

---

ಕಲಶಗಳ ವಿಷಯವು ಮತ್ತೊಂದು. ಶಿವಾನುಭವಸೂತ್ರದ ಪಂಚಮಾಧಿಕರಣದ ಲಿಂಗಾಂಗಸಂಯೋಗವಿಧಿಯಲ್ಲಿ ಬಂದಿರುವ ದೀಕ್ಷಾವಿಧಿಗೆ ಸೇರಿದ ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆಯೆಂಬ ತ್ರಿವಿಧದೀಕ್ಷೆಗಳಲ್ಲಿ ಒಂದಾದ ಮಂತ್ರದೀಕ್ಷೆಯೇ ಬ್ರಹ್ಮೋಪದೇಶವಿಧಿಯೆನಿಸುವುದು. ಅದು ಬೇರೆ ಕಾಲದಲ್ಲಿ ಮಾಡುವ ಪ್ರತ್ಯೇಕವಿಧಿಯಲ್ಲವೆಂದು ಕೆಲವರ ವಾದವಿರುವುದು. ಮತ್ತು ಷಟ್‌ಸ್ಥಲಗಳಿಗನುಸರಿಸಿ, ಷಟ್‌ಕಲಶಗಳನ್ನು ಸ್ಥಾಪಿಸುವುದೇ ಯೋಗ್ಯವು; ಪಂಚಕಲಶಗಳನ್ನು ಸ್ಥಾಪಿಸುವುದು ಸರಿಯಲ್ಲವೆಂದು ವಾದಿಸುವವರಿರುವರು. ಆದರೆ ಧರ್ಮಜ್ಞರಾದ ಬಹುಜನರ ಅಭಿಪ್ರಾಯವು ಹೀಗಿರುವುದು :

ಸಮಾಜದೃಷ್ಟಿಯಿಂದ ಸಂಪ್ರದಾಯಬದ್ಧವಾಗಿರುವ ದೀಕ್ಷೆಗಳು ನಾಲ್ಕು ಬಗೆಯಾಗಿರುವವು :

## ೧. ಸಮಯದೀಕ್ಷೆ

ವಂಶಾನುಗತವಾದ ವೀರಶೈವಮತದಲ್ಲಿ ಹುಟ್ಟುವ ಶಿಶುವಿನ ಭವಿತ್ವವನ್ನು ಪರಿಹರಿಸುವುದಕ್ಕಾಗಿ, ಆ ಶಿಶುವಿಗೆ ಗರ್ಭದಲ್ಲಿರುವ ಎಂಟನೆಯ ತಿಂಗಳಲ್ಲಿ ಅಥವಾ ಜನನವಾದೊಡನೆ ಮಾಡುವ ಲಿಂಗಧಾರಣವೇ ಸಮಯದೀಕ್ಷೆಯೆನಿಸುವುದು. (ಇದು ತ್ರಿವಿಧದೀಕ್ಷೆಗಳಲ್ಲಿ ಒಂದಾದ ವೇಧಾದೀಕ್ಷೆಗೆ ಸೇರಿರುವ ಸಪ್ತವಿಧದೀಕ್ಷೆಗಳಲ್ಲಿ ಒಂದಾದ ಸಮಯದೀಕ್ಷೆಗೆ ಭಿನ್ನವಾಗಿರುವುದು.)

## ೨. ಸಾಧಕದೀಕ್ಷೆ

ವಂಶಾನುಗತವಾದ ವೀರಶೈವಮತದ ಸರ್ವರಿಗೂ ಎಂಟನೆಯ ವರ್ಷದಿಂದ ಹದಿನಾರನೆಯ ವರ್ಷದೊಳಗೆ ಮಾಡುವ ವೇಧಾ-ಮಂತ್ರ-ಕ್ರಿಯಾತ್ಮಕವಾದ ತ್ರಿವಿಧದೀಕ್ಷೆಯೇ ಸಾಧಕದೀಕ್ಷೆಯೆನಿಸುವುದು. ಈ ದೀಕ್ಷೆಯನ್ನೇ ವೀರಶೈವಮತದಲ್ಲಿ ಸೇರಲಪೇಕ್ಷಿಸುವ ಆಗಂತುಕರಿಗೂ ಮಾಡುವ ಸಂಪ್ರದಾಯವಿರುವುದು.

## ೩. ಆಚಾರ್ಯಾಭಿಷೇಕದೀಕ್ಷೆ

ಸಮಾಜದ ಗುರುಜಂಗಮಾಧಿಕಾರಗಳನ್ನು ವಹಿಸುವವರಿಗೆ ಗುರುತ್ವ ಜಂಗಮತ್ವ ಸಂಸ್ಕಾರಗಳೊಡನೆ ಮಾಡುವ ದೀಕ್ಷೆಯೇ ಆಚಾರ್ಯಾಭಿಷೇಕ ದೀಕ್ಷೆಯೆನಿಸುವುದು.

ಈ ಬಗೆಯ ಮೂರು ದೀಕ್ಷೆಗಳನ್ನು ಮಾಡುವ ಸಂಪ್ರದಾಯವನ್ನು ನಿಜಗುಣರ ಪಾರಮಾರ್ಥಪ್ರಕಾಶಿಕೆಯ ಪ್ರಥಮ ಪರಿಚ್ಛೇದದಲ್ಲಿ ಬಂದಿರುವ ಕೆಳಗಿನ ವಾಕ್ಯಗಳು ಪುಷ್ಟೀಕರಿಸುವವು : “ ದೀಕ್ಷೆಯು ಹಲವು ತೆರನಾದಡೂ ಸಮಯದೀಕ್ಷೆ, ಸಾಧಕದೀಕ್ಷೆ, ಆಚಾರ್ಯಾಭಿಷೇಕದೀಕ್ಷೆ ಎಂದು ಮೂರು ಕಟ್ಟಾಗಿರ್ಪುದವರಲ್ಲಿ : ೧. ಅಸಮರ್ಥರ್ಗೆ ಮಾಳ್ಪುದೇ ಸಮಯದೀಕ್ಷೆಯೆನಿಸುವುದು. ೨. ಸಮರ್ಥರ್ಗೆ ಮಾಳ್ಪುದೇ ಸಾಧಕ-ದೀಕ್ಷೆಯೆನಿಸುವುದು. ೩. ಆ ಸಾಧಕರೊಳಗೆ ವಿಶಿಷ್ಟಮಾದುಪ-ದೇಶಕರ್ತೃವಿಗೆ ಮಾಳ್ಪುದೇ ಆಚಾರ್ಯಾಭಿಷೇಕಮಕ್ಕುಂ ”.

## ೪. ಅನುಗ್ರಹದೀಕ್ಷೆ

ದೀಕ್ಷಿತರಾದ ಸಾಧಕರಲ್ಲಿ ತಮ್ಮ ಸಾಧನೆಗೆ ಲೋಪ ಬರದಂತೆ ನಡೆಯ-ಬೇಕೆಂಬ ದೃಢಪ್ರತಿಜ್ಞೆಯುಳ್ಳ ಭಕ್ತರಿಗೂ ಗುರುಜಂಗಮರಿಗೂ ಮಾಡುವ ದೀಕ್ಷೆಯೇ ಅನುಗ್ರಹದೀಕ್ಷೆಯೆನಿಸುವುದು. ಇದನ್ನೇ ಬ್ರಹ್ಮೋಪದೇಶ-ವಿಧಿಯೆಂದು ಕರೆಯಬೇಕು. ಈ ವಿಧಿಯಲ್ಲಿ ಮಂತ್ರಮೂಲಕವಾಗಿಯೇ ಬ್ರಹ್ಮೋಪದೇಶವನ್ನು ಮಾಡಬೇಕು. ಈ ವಿಷಯದಲ್ಲಿ- “ಲಿಂಗಾಂಗಯೋಃ ಸಾಮರಸ್ಯಂ ಮಹಾವಾಕ್ಯೋಪದೇಶವತ್ । ಪಂಚಾಕ್ಷರಮಹಾಮಂತ್ರಾ-ದ್ಬೋಧನೀಯಂ ವಿಪಶ್ಚಿತಾ ॥ (ಕ್ರಿ. ಉ. ೪) “ ಪಂಚಾಕ್ಷರಾರ್ಥತಶ್ಚೇ-

ಮಮಾರ್ಥಂ ಶಿಷ್ಯಸ್ಯ ಬೋಧಯೇತ್ " (ಕ್ರಿ. ಉ. ೯) ಎಂಬ ನೀಲಕಂಠ ಶಿವಾಚಾರ್ಯರ ಉಕ್ತಿಗಳೂ ಪ್ರಮಾಣವಾಗಿರುವವು. ಈ ಅನುಗ್ರಹ ದೀಕ್ಷೆಯನ್ನು ಹೊಂದಿದವರನ್ನೇ ಅನುಗ್ರಹಸ್ಥರು, ಪ್ರಸಾದಿಕರು, ಹಸ್ತಿ-ಕರು - ಎಂದು ಕರೆಯುವ ಸಂಪ್ರದಾಯವಿರುವುದು. ( ಈ ದೀಕ್ಷೆಯೂ ಸಪ್ತವಿಧವಾದ ವೇಧಾದೀಕ್ಷೆಯಲ್ಲಿ ಸೇರಿದ ಅನುಗ್ರಹದೀಕ್ಷೆಗೆ ಭಿನ್ನ-ವಾಗಿರುವುದು.

## ಕಲಶಸ್ಥಾಪನೆಯ ವಿಷಯ

ಬ್ರಹ್ಮೋಪದೇಶವಿಧಿಯಲ್ಲಿ ಷಟ್‌ಸ್ಥಲಾತ್ಮಕವಾದ ಷಟ್‌ಕಲಶಗಳನ್ನು ಸ್ಥಾಪಿಸಬೇಕೆಂದು ಉಕ್ತವಾಗಿರುವುದು ಯೋಗ್ಯವಾಗಿರುವುದು. ಈ ಉಕ್ತಿಗನುಸರಿಸಿ ದೀಕ್ಷಾವಿಧಿಯಲ್ಲಿಯೂ ಆರು ಕಲಶಗಳ ಸ್ಥಾಪನೆ-ಯಿರುವುದು. ಪಂಚಪೀಠಕ್ಕನುಸರಿಸಿ, ಪಂಚಕಲಶಗಳನ್ನು ಗುರುಕಲಶ ಗಳೆಂದೂ, ಜಂಗಮಪೀಠಕ್ಕನುಸರಿಸಿ, ಒಂದು ಕಲಶವನ್ನು ನಿರಂಜನ ಜಂಗಮಕಲಶವೆಂದೂ ಹೇಳುವ ಸಂಪ್ರದಾಯವಿರುವುದು. ಗುರು-ಜಂಗಮರುಭಯರೂ ಷಟ್‌ಸ್ಥಲಬ್ರಹ್ಮಮೂರ್ತಿಗಳಾಗಿರುವುದರಿಂದ ಅವರ ಕಲಶಗಳೂ ಷಟ್‌ಸ್ಥಲಾತ್ಮಕವಾಗಿರುವವೆಂಬುದನ್ನು ಗಮನಿಸಿದಲ್ಲಿ ಯಾವ ವಾದವೂ ಇರುವುದಿಲ್ಲ. ಮೇಲೆ ವಿವರಿಸಿದ ಈ ಬಗೆಯ ವಿಚಾರದಲ್ಲಿ ಧರ್ಮಜ್ಞರಾದ ಬಹುಜನರ ಅಭಿಪ್ರಾಯವು ಏಕೀಭವಿಸುವುದು.

ಸೂ. ೩೧. ಪರಾನುಭವಸೂತ್ರೋಕ್ತವಾಗಿರುವ ಪರಮಾರ್ಥಪದವಾದ ಈ ವಿಷಯನಿರೂಪಣೆಯನ್ನು ಯಾವಾತನು ತಿಳಿದು ಆಚರಿಸುವನೋ; ಆತನೇ ಆಚಾರ್ಯಶ್ರೇಷ್ಠನಾಗಿ ವಿಭುವೆನಿಸುವನು.

ಇಂತು ಶ್ರೀ ಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ಬ್ರಹ್ಮೋಪದೇಶವಿಧಿಯ
ಪ್ರಥಮಾಧಿಕರಣಂ
ಸಂಪೂರ್ಣಂ

॥ ಶ್ರೀಗುರುಲಿಂಗಜಂಗಮೇಭ್ಯೋ ನಮಃ ॥

## ದ್ವಿತೀಯಾಧಿಕರಣೇ ಷಟ್‌ಸ್ಥಲಬ್ರಹ್ಮಪೂಜಾ

ಗುರುಃ

ಅಥ ವಕ್ಷ್ಯೇ ವಿಶೇಷೇಣ ಶಿವಲಿಂಗಾರ್ಚನಕ್ರಮಂ
ಪೂಜೋಪಚಾರವಿಧಿನಾ ಷಟ್‌ತ್ರಿಂಶದ್‌ಭೇದಭೇದಿತಂ ೧

ಪೂಜಾ ದ್ವಾದಶಧಾ ಪ್ರೋಕ್ತಾ ಶಿವಸಿದ್ಧಾಂತತತ್ಪರೈಃ
ಉಪಚಾರಾಸ್ತಥಾ ಚೈವ ಚತುರ್ವಿಂಶದ್ವಿಧಾಃ ಸ್ಮೃತಾಃ ೨

---

### ದ್ವಿತೀಯಾಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮಪೂಜೆ

ಗುರು - ಷಟ್‌ಸ್ಥಲಬ್ರಹ್ಮರೂಪವಾದ ಲಿಂಗದ ಪೂಜಾವಿಧಾನವನ್ನು ಹೇಳಲುಪಕ್ರಮಿಸಿ, ಪೂಜಾವಿಧಾನವು ಪೂಜೆ ಮತ್ತು ಉಪಚಾರವೆಂಬ ಭೇದದಿಂದ ಮೂವತ್ತಾರು ಬಗೆಯಾಗಿರುವುದನ್ನು ೧ ನೆಯ ಸೂತ್ರದಿಂದ ತಿಳಿಸಿ, ಮುಂದಿನ ೭ ಸೂತ್ರಗಳಿಂದ ಮೂವತ್ತಾರು ಬಗೆಗಳನ್ನು ವಿವರಿಸು-ವನು :

ಸೂ. ೧. ಬ್ರಹ್ಮೋಪದೇಶವಿಧಿಯನಂತರದಲ್ಲಿ ಶಿವಲಿಂಗಾರ್ಚನಕ ಮ-ಪನ್ನು ವಿಶೇಷ ರೀತಿಯಿಂದ ಹೇಳುವೆನು. ಅರ್ಚನಕ್ರಮವು ಪೂಜೆ ಮತ್ತು ಉಪಚಾರವೆಂಬ ಭೇದದಿಂದ ಮೂವತ್ತಾರು ಪ್ರಕಾರವಾಗಿರುವುದು.

ಸೂ. ೨ ರಿಂದ ೫. ಶಿವಸಿದ್ಧಾಂತಜ್ಞರು ಪೂಜೆಯು ದ್ವಾದಶವಿಧವೆಂದು ಹೇಳುವರು. ಅವು ಲಿಂಗಕ್ಕಾಗಿ ಮಾಡುವ ವಿಭೂತಿಯ ಅಭ್ಯುಕ್ಷಣ೧

ವಿಭೂತ್ಯಭ್ಯುಕ್ಷಣಂ ಲಿಂಗೇ ಕರಣಂ ಸ್ನಪನಂ ತಥಾ
ಅಂಗಾರತಾಪನಂ ಚೈವ ಧೂಪಸಂವೀಜನಂ ತಥಾ ೩

ಧೂಮಪ್ರಸಾರಣಂ ಚೈವ ತತೋ ಗಂಧಾವತಂಸನಂ
ಅಕ್ಷತಾರೋಪಣಂ ಚೈವ ಪುಷ್ಪೋಪಹರಣಂ ತಥಾ ೪

ದೀಪಪ್ರಕಾಶನಂ ಚೈವ ನೈವೇದ್ಯಸ್ಯ ಸಮರ್ಪಣಂ
ತಾಂಬೂಲಸ್ಯ ಪ್ರದಾನಂ ಚ ವಸ್ತ್ರಪ್ರಾವರಣಂ ತಥಾ ೫

ಏವಂ ದ್ವಾದಶಧಾ ಪ್ರೋಕ್ತಾ ಶಿವಲಿಂಗಾರ್ಚನಕ್ರಿಯಾ—
ಆಸನಾಹ್ವಾನಮರ್ಘ್ಯಂ ಚ ಪಾದ್ಯಮಾಚಮನಂ ತಥಾ
ಯಜ್ಞೋಪವೀತಮಾಲ್ಯಾನುಲೇಪನಾಭರಣಾನಿ ಚ ೬

ಛತ್ರಂ ಚ ಚಾಮರಂ ಚೈವ ತಾಲವೃಂತಂ ಚ ದರ್ಪಣಂ
ಘಂಟಾ ಶಂಖಂ ಚ ಗೀತಂ ಚ ವಾದ್ಯಂ ನೃತ್ಯಂ ಪ್ರದಕ್ಷಿಣಂ ೭

ನಮಸ್ಕಾರಃ ಸ್ತುತಿರ್ಯಾಚಾ ವಿಜ್ಞಪ್ತಿಸ್ತು ವಿಸರ್ಜನಂ
ಇತ್ಯೇವಮುಪಚಾರಾಶ್ಚ ಚತುರ್ವಿಂಶದ್ವಿಧಾಃ ಸ್ಮೃತಾಃ ೮

---

ಸ್ನಾನ ೨, ಅಗ್ನಿತಾಪನ ೩, ಧೂಪಸಮರ್ಪಣ ೪, ಧೂಮಪ್ರಸಾರಣ ೫, ಗಂಧಲೇಪನ ೬, ಅಕ್ಷತಾರೋಪಣ ೭, ಪುಷ್ಪಸಮರ್ಪಣ ೮, ದೀಪಪ್ರಕಾಶನ ೯, ನೈವೇದ್ಯಸಮರ್ಪಣ ೧೦, ತಾಂಬೂಲಪ್ರದಾನ ೧೧, ವಸ್ತ್ರಪ್ರಾವರಣ ೧೨ ವೆಂದು ೧೨ ಇರುವವು.

ಸೂ. ೬ ರಿಂದ ೮. ಆಸನ ೧, ಆಹ್ವಾನ ೨, ಅರ್ಘ್ಯ ೩, ಪಾದ್ಯ ೪. ಆಚಮನ ೫, ಯಜ್ಞೋಪವೀತ ೬, ಮಾಲ್ಯ ೭, ಗಂಧಾನುಲೇಪನ ೮, ಆಭರಣ ೯, ಛತ್ರ ೧೦, ಚಾಮರ ೧೧, ವ್ಯಜನ ೧೨, ದರ್ಪಣ ೧೩, ಘಂಟೆ ೧೪, ಶಂಖ ೧೫, ಗೀತ ೧೬, ವಾದ್ಯ ೧೭, ನೃತ್ಯ ೧೮, ಪ್ರದಕ್ಷಿಣ ೧೯, ನಮಸ್ಕಾರ ೨೦, ಸ್ತೋತ್ರ ೨೧, ಯಾಚನ ೨೨, ವಿಜ್ಞಪ್ತಿ ೨೩, ವಿಸರ್ಜನ ೨೪. - ಇವು ಲಿಂಗಕ್ಕೆ ಮಾಡುವ ಉಪಚಾರಗಳಾಗಿರುವವು.

ಸಮರ್ಚನೋಪಚಾರಾಣಾಂ ಯೋಗಃ ಷಟ್‌ತ್ರಿಂಶದೀರಿತಃ
ಷಟ್‌ತ್ರಿಂಶತ್ತತ್ತ್ವಮಯ್ಯೇಷಾ ಶೈವೀ ಸ್ಥಿತಿರಿತಿ ಶ್ರುತಿಃ ೯

ಅಥಾರ್ಚನೋಪಚಾರಾಣಾಂ ಯೋಗಕ್ರಮ ಉದೀರ್ಯತೇ
ಭಸ್ಮಸ್ನಾನಾದಿಭಿಃ ಶುದ್ಧೀಕರಣಂ ವಿಧಿವತ್ತತಃ ೧೦

ಶ್ರೀಮತ್ಪಂಚಾಕ್ಷರೀ ಮಂತ್ರಾನುಷ್ಠಾನಂ ತತ ಆಸನಂ
ಕರಾಬ್ಜಪೀಠರೂಪೇಣ ತತ ಆವಾಹನಂ ಪರಂ ೧೧

ಆನೀಯಾಂಗಸ್ಥಲಿಂಗೋಪವೇಶನಂ ತತ್ರ ಚಾಸನೇ
ವಿಭೂತ್ಯಭ್ಯುಕ್ಷಣಂ ಪೂರ್ವಂ ಸಮಂತ್ರಕಮನಂತರಂ ೧೨

ಅರ್ಘ್ಯಾದ್ಯಾಚಮನಾಂತಂ ವೈ ತತಃ ಸ್ನಪನಕರ್ಮ ಚ
ಅಂಗಾರತಾಪನಾದೀನಿ ದಶ ಚೋಕ್ತಾನಿ ಪೂರ್ವವತ್ ೧೪

---

ಸೂ. ೯. ಪೂಜೋಪಚಾರಗಳಿಂದ ಕೂಡಿ ೩೬ ಪ್ರಕಾರಗಳಾದ ಇವುಗಳು ಶಿವಸಂಬಂಧವಾದ ೩೬ ತತ್ತ್ವರೂಪವಾಗಿರುವವೆಂಬುದು ಶ್ರುತಿಸಮ್ಮತವಾಗಿರುವುದು.

ಸೂ. ೧೦ ರಿಂದ ೧೪. ಬಳಿಕ ಅರ್ಚನೋಪಚಾರಗಳನ್ನು ಉಪಯೋಗಿಸುವ ಕ್ರಮವು ಹೇಳಲ್ಪಡುತ್ತದೆ. ಆ ಕ್ರಮವು ಹೀಗಿದೆ: ಮೊದಲು ವಿಧಿಗನುಸರಿಸಿ ಭಸ್ಮಸ್ನಾನಾದಿಗಳಿಂದ ಶುದ್ಧೀಕರಣವನ್ನು ಮಾಡಿಕೊಂಡು ಆಮೇಲೆ ಶ್ರೀಮತ್ಪಂಚಾಕ್ಷರೀ ಜಪವನ್ನು ಮಾಡಬೇಕು. ಬಳಿಕ ಹಸ್ತಕಮಲವೆಂಬ ಆಸನದಲ್ಲಿ ಅಂಗದಲ್ಲಿರುವ ಇಷ್ಟಲಿಂಗವನ್ನು ಆಹ್ವಾನಿಸಿ, ಮೂರ್ತಗೊಳಿಸಬೇಕು. ಆಮೇಲೆ ಲಿಂಗಕ್ಕೆ ಮಂತ್ರಪೂರ್ವಕವಾಗಿ ವಿಭೂತಿಯ ಅಭ್ಯುಕ್ಷಣವನ್ನು ಮಾಡಿ, ಅರ್ಘ್ಯ, ಪಾದ್ಯ, ಆಚಮನಗಳೊಡನೆ ಸ್ನಾನಕ್ರಿಯೆಯನ್ನು ಮುಗಿಸಿ, ಪೂರ್ವೋಕ್ತವಾದ ಅಂಗಾರತಾಪನಾದಿ ದಶಪೂಜೆಗಳನ್ನು ನೆರವೇರಿಸಬೇಕು. ಆಮೇಲೆ ಪೂರ್ವೋಕ್ತವಾದ ಯಜ್ಞೋಪವೀತದಿಂದ ವಿಜ್ಞಪ್ತಿಯವರೆಗಿರುವ

ತತೋ ಯಜ್ಞೋಪವೀತಾದಿ ವಿಜ್ಞಪ್ತ್ಯಂತಂ ಯಥಾ ತಥಾ
ವಿಸರ್ಜನಂ ಕರಸ್ಥಸ್ಯ ಲಿಂಗಸ್ಯಾಂಗೇ ನಿವೇಶನಂ ೧೪

ಏವಂ ಲಿಂಗಾರ್ಚನಂ ಯಸ್ತು ಕುರುತೇ ಭಕ್ತಿಪೂರ್ವಕಂ
ಸೋಪಚಾರವಿಧಾನೇನ ಸ ಶಿವಾರ್ಪಣವಿದ್ಭವೇತ್ ೧೫

ಅರ್ಚನಾರ್ಪಣಯೋರ್ಭೇದೋ ನಾತ್ಯಂತಮುಪಪದ್ಯತೇ
ಕ್ರಿಯಾವಿಶೇಷತೋ ಭೇದಸ್ತಯೋರೀಷತ್ಪ್ರಕೀರ್ತ್ಯತೇ ೧೬

ಅರ್ಚನಾರ್ಪಣಸಾಪೇಕ್ಷಾ ವರ್ತತೇ ದ್ರವ್ಯಶುದ್ಧಯೇ
ಅರ್ಪಣಾದ್ದ್ರವ್ಯಶುದ್ಧಿಃ ಸ್ಯಾತ್ಪ್ರಸಾದಸ್ತದನಂತರಂ ೧೭

---

ಉಪಚಾರಗಳನ್ನು ಮುಗಿಸಿ, ಕರಪೀಠದಲ್ಲಿರುವ ಲಿಂಗವನ್ನು ವಿಸರ್ಜಿಸಿ ಅಂಗದಲ್ಲಿ ನಿವೇಶನಗೊಳಿಸಬೇಕು.

ಸೂ. ೧೫. ಹೀಗೆ ಮೇಲೆ ಹೇಳಿದಂತೆ ಯಾವಾತನು ಭಕ್ತಿಪೂರ್ವಕ-ವಾಗಿ ಪೂಜೋಪಚಾರಗಳಿಂದ ಕೂಡಿದ ಲಿಂಗಾರ್ಚನವನ್ನು ಮಾಡು-ವನೋ, ಆತನು ಲಿಂಗಾರ್ಪಣಜ್ಞಾನಿಯೆನಿಸುವನು.

ಸೂ. ೧೬. ಅರ್ಚನ-ಅರ್ಪಣಗಳಲ್ಲಿ ಅತ್ಯಂತ ಭೇದವಿಲ್ಲ. ಅರ್ಚನಾ-ರ್ಪಣ ಕ್ರಿಯಾಮೂಲಕವಾಗಿ ಕಿಂಚಿದ್ಭೇದವು ತೋರುವುದಷ್ಟೆ.

ಸೂ. ೧೭. ಅರ್ಚನೆಗೆ ಅರ್ಪಣದ ಸಾಪೇಕ್ಷೆಯು ದ್ರವ್ಯಶುದ್ಧಿಗಾಗಿ ಏರ್ಪಟ್ಟಿರುವುದು. ಮೊದಲು ಅರ್ಪಣದಿಂದ ದ್ರವ್ಯಶುದ್ಧಿಯಾದರೆ ಆಮೇಲೆ ಪ್ರಸಾದವು ಸಂಭವಿಸುವುದು.

ಲಿಂಗಪೂಜೋಪಚಾರಗಳಲ್ಲಿ ಹೇಗೆ ಯಾವ ದ್ರವ್ಯಗಳ ಶುದ್ಧಿಯಾಗುವು-ದೆಂಬುದು ೧೮ ರಿಂದ ಮುಂದಿನ ನಾಲ್ಕು ಸೂತ್ರಗಳಲ್ಲಿ ವಿವರಿಸಲ್ಪಡು-ವುದು.

ವಿಭೂತ್ಯಭ್ಯುಕ್ಷಣಾಲ್ಲಿಂಗೇ ಪೃಥಿವೀ ಪರಿಶುಧ್ಯತಿ
ಆಪಶ್ಚ ಸ್ನಪನಾತ್ತದ್ವದ್ವಹ್ನಿರಂಗಾರತಾಪನಾತ್ ೧೮

ವಾಯುಸ್ತಥಾ ಶಿವೋದ್ದಿಷ್ಟಧೂಪವ್ಯಜನಕರ್ಮಣಾ
ಧೂಪಧೂಮೇನ ಚಾಕಾಶಶ್ಚಂದ್ರೋ ಗಂಧಾವತಂಸನಾತ್ ೧೯

ಜ್ಯೋತ್ಸ್ನಾ ಕರ್ಪೂರದೀಪೇನ ನಕ್ಷತ್ರಾಣ್ಯಕ್ಷತೈಃ ಶುಭೈಃ
ಸೂರ್ಯಃ ಪುಷ್ಪೋಪಹಾರೇಣ ಘೃತದೀಪೇನ ಚಾತಪಃ ೨೦

ಛಾಯಾ ಪಶ್ಚಾತ್ಪುರಸ್ತಾಚ್ಚ ಪಾರ್ಶ್ವತೋ ದೀಪಚಾರಣಾತ್
ಶೀತೋಷ್ಣಾದೀನಿ ಪೂರ್ವೋಕ್ತತತ್ತದಂಶೋದ್ಭವಾನಿ ಹಿ ೨೧

ಆತ್ಮಾ ನೈವೇದ್ಯರೂಪೇಣ ತಾಂಬೂಲೇನ ಗುಣತ್ರಯಂ
ವಸ್ತ್ರಪ್ರಾವರಣಾದೇವ ವಿಶುಧ್ಯಂತಿ ದಿಶೋ ದಶ ೨೨

---

ಸೂ. ೧೮ ರಿಂದ ೨೨ ಲಿಂಗಕ್ಕೆ ಮಾಡುವ ವಿಭೂತಿಯ ಅಭ್ಯುಕ್ಷಣದಿಂದ ಪೃಥ್ವಿಯೂ, ಸ್ನಾನಕ್ರಿಯೆಯಿಂದ ಜಲವೂ, ಅಂಗಾರ ತಾಪನದಿಂದ ಅಗ್ನಿಯೂ ಶುದ್ಧವಾಗುವವು. (೧೮) ಲಿಂಗಕ್ಕೆ ಧೂಪಾರ್ಪಣ ಮಾಡು-ವದರಿಂದ ವಾಯುವೂ, ಧೂಪಧೂಮದಿಂದ ಆಕಾಶವೂ ಶುದ್ಧವಾಗುವವು. ಗಂಧಲೇಪನದಿಂದ ಚಂದ್ರನು ಶುದ್ಧನಾಗುವನು. (೧೯) ಲಿಂಗಕ್ಕೆ ಬೆಳಗುವ ಕರ್ಪೂರದೀಪದಿಂದ ಬೆಳದಿಂಗಳೂ, ಲಿಂಗಕ್ಕೆ ಅರ್ಪಿಸುವ ಅಕ್ಷತೆಗಳಿಂದ ನಕ್ಷತ್ರಗಳೂ, ಪುಷ್ಪಾರ್ಪಣದಿಂದ ಸೂರ್ಯನೂ, ಘೃತದೀಪ ದಿಂದ ಬಿಸಿಲೂ ಶುದ್ಧವಾಗುವವು. (೨೦) ಲಿಂಗದ ಹಿಂದೆ, ಮುಂದೆ, ಬಗಲಿಗೆ ಮಾಡುವ ದೀಪಚಾರಣದಿಂದ ನೆರಳು ಶುದ್ಧವಾಗುವುದು. ಇನ್ನು ಪೂರ್ವೋಕ್ತವಾದ ದ್ರವ್ಯಶುದ್ಧಿಯಿಂದ ಆಯಾ ದ್ರವ್ಯಗಳ ಅಂಶ-ದಿಂದುತ್ಪನ್ನವಾಗುವ ಶೀತೋಷ್ಣಾದಿಗಳೂ ಶುದ್ಧವಾಗುವವೆಂಬುದನ್ನು ಭಾವಿಸಬೇಕು. (೨೧) ಲಿಂಗಕ್ಕರ್ಪಿಸುವ ನೈವೇದ್ಯದಿಂಡ ಆತ್ಮನೂ, ಲಿಂಗಾರ್ಪಿತವಾಗುವ ತಾಂಬೂಲದಿಂದ ಆತ್ಮನ ಸತ್ವರಜಸ್ತಮೋರೂಪವಾದ ಗುಣತ್ರಯವೂ, ಲಿಂಗಕ್ಕೆ ಹೊದಿಸುವ ವಸ್ತ್ರದಿಂದ ದಶದಿಕ್ಕುಗಳೂ ಶುದ್ಧ ವಾಗುವವು. (೨೨)

ಏವಮರ್ಪಣಸಾಪೇಕ್ಷೈರರ್ಚನೈಃ ಶಿವಮರ್ಚಯೇತ್
ದ್ರವ್ಯಶುದ್ಧಿಂ ಪರಾಂ ಲಬ್ಧ್ವಾ ಪ್ರಸಾದಸುಖಮಶ್ನುತೇ ೨೩

ತತ್ಪ್ರಸಾದಸುಖೇನೈವ ಪರಮೋ ಭವತಿ ಧ್ರುವಂ
ವೃತ್ತಂ ॥ ಶಾಂತಿರ್ವಾರಿ ಸುಖಂ ಶಮಃ ಸುಮನಸಃ
ಶ್ರೀಖಂಡಪಿಂಡೋಕ್ಷತಾ
ಜ್ಞಾನಂ ಕೇಸರಮಾತ್ಮನೈವ ಕುಸುಮಂ ಧೂಪೋ ಭವೇತ್ಸೌರಭಂ
ದೀಪಃ ಕಾಂತಿರಥಾರ್ಚನಾರತಿಮಹಾನ್ನೈವೇದ್ಯರೂಪಂ ತತ
ಸ್ತಾಂಬೂಲಂ ನಿಜಭಕ್ತಿರಾಗರಸ ಏವೇತ್ಯಷ್ಟಧಾ ಪೂಜನಂ ೨೪

---

ಸೂ. ೨೩. ಹೀಗೆ ಅರ್ಪಣಸಾಪೇಕ್ಷಗಳಾದ ಅರ್ಚನಗಳಿಂದ ಶಿವಲಿಂಗವನ್ನರ್ಚಿಸಿದರೆ, ಅರ್ಚನಾರ್ಪಣಮುಖದಿಂದ ದ್ರವ್ಯಶುದ್ಧಿಯುಂಟಾಗುವುದು. ಲಿಂಗಾರ್ಪಿತವಾದ ಶುದ್ಧದ್ರವ್ಯವೇ ಪ್ರಸಾದವಾಗಿ ಪರಿಣಮಿಸುವುದರಿಂದ ಲಿಂಗಾರ್ಚಕನು ಆ ಪ್ರಸಾದವನ್ನನುಭವಿಸುವನು.

ಹೀಗೆ ಪ್ರಸಾದಸುಖದಿಂದಿರುವ ಲಿಂಗಾರ್ಚಕನೇ ಶ್ರೇಷ್ಠನೆಂದು ೨೩ ನೆಯ ಸೂತ್ರದ ಮುಂದಿನ ಸೂತ್ರಾರ್ಧದಲ್ಲಿ ಉಕ್ತನಾಗಿರುವನು.

೨೪ ನೆಯ ಸೂತ್ರದಲ್ಲಿ ಮಾನಸಿಕ ಲಿಂಗಪೂಜಾಕ್ರಮವು ಉಕ್ತವಾಗಿರುವುದು.

ಸೂ. ೨೪. ಅಂತರಂಗದ ಲಿಂಗಪೂಜೆಗೆ ಉಪಯೋಗಿಸುವ ಅಷ್ಟವಿಧವಾದ ಪೂಜಾದ್ರವ್ಯಗಳೆನಿಸಿದ ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಗೆ ಪ್ರತಿಯಾಗಿ - ಪರಿವಿಡಿಯಿಂದ - ಆತ್ಮ, ಶಾಂತಿ (೧), ಮನಸ್ಸಿನ ಸುಖ (೨), ಶಮಗುಣ (೩), ಜ್ಞಾನವೆಂಬ ಕೇಸರದಿಂದ ಕೂಡಿದ ಆತ್ಮಕುಸುಮ (೪), ಆತ್ಮನ ಸದ್ವಾಸನ (೫), ಆತ್ಮತೇಜಸ್ಸು (೬), ಅರ್ಚನಪ್ರೀತಿ (೭), ನಿಜಭಕ್ತಿರಾಗರಸ (೮). ಈ ಎಂಟನ್ನು ಉಪಯೋಗಿಸಿಕೊಳ್ಳಬೇಕು. ಎಂದರೆ, ಈ ಎಂಟು ಅರ್ಚಕನಲ್ಲಿ ಮೈಗೂಡಬೇಕೆಂದು ತಾತ್ಪರ್ಯ.

ಇತಃ ಪರಂ ವಿಶೇಷೇಣ ವೀರಶೈವಾರ್ಚನಕ್ರಮಂ
ಷಟ್‌ಸ್ಥಲಾತ್ಮಕರೂಪೇಣ ಪ್ರವಕ್ಷ್ಯಾಮಿ ಸಮಾಸತಃ ೨೫

ಭಕ್ತಸ್ಥಲೇ ಸುಖಾಸೀನೋ ಭೂತಿರುದ್ರಾಕ್ಷಧಾರಣಂ
ಕೃತ್ವಾ ಭಕ್ತ್ಯಾ ಸುಪೂತಾತ್ಮಾ ತತೋ ಮಾಹೇಶ್ವರಸ್ಥಲೇ ೨೬

ಷಡಕ್ಷರಂ ಪರಂ ಮಂತ್ರಮನುಷ್ಠಾಯಾತ್ಮನಿಷ್ಠಯಾ
ಪ್ರಸಾದಿಸ್ಥಲಮಾದಾಯ ಲಿಂಗಂ ಹಸ್ತೇಽವಧಾನತಃ ೨೭

ಪ್ರಾಣಲಿಂಗಿಸ್ಥಲೇ ಪೂಜಾಂ ವಿಧಾಯ ಸ್ವಾನುಭೂತಿತ
ಸ್ತತಃ ಶಿವಾರ್ಪಣಂ ಕೃತ್ವಾ ಸ್ವಾನಂದಾಚ್ಛರಣಸ್ಥಲೇ ೨೮

ಐಕ್ಯಸ್ಥಲೇ ಪ್ರಸಾದೋಪಭೋಗತೃಪ್ತಿಮವಾಪ್ಯ ಚ
ಏವಂ ಸಮರಸೀಭಾವಾತ್‌ಷಡಂಗಸ್ಥಲಯೋಗತಃ ೨೯

---

ಸೂ. ೨೫. ಇನ್ನು ಮುಂದೆ ಷಟ್‌ಸ್ಥಲಾತ್ಮಕರೂಪದಿಂದಿರುವ ವೀರಶೈವಾರ್ಚನದ ವೈಶಿಷ್ಟ್ಯವನ್ನು ಸಂಕ್ಷಿಪ್ತವಾಗಿ ಹೇಳುವೆನು.

### ಷಟ್‌ಸ್ಥಲಕ್ಕನುಸರಿಸಿದ ಲಿಂಗಾರ್ಚನಕ್ರಮ

ಸೂ. ೨೬ ರಿಂದ ೩೦. ವೀರಶೈವನು ಸ್ನಾನಾದಿಗಳಿಂದ ಪವಿತ್ರಾತ್ಮನಾಗಿ ಸುಖಾಸನದಲ್ಲಿ ಕುಳಿತು ಶ್ರದ್ಧಾಭಕ್ತಿಯಿಂದ ವಿಭೂತಿರುದ್ರಾಕ್ಷಗಳನ್ನು ವಿಧಿಗನುಸರಿಸಿ ಧಾರಣಮಾಡಿಕೊಳ್ಳುವುದು ಭಕ್ತಸ್ಥಲಕ್ಕೆ ಸಂಬಂಧಿಸಿದ ಪೂಜೆಯೆನಿಸುವುದು. ಆಮೇಲೆ ನಿಷ್ಠಾಭಕ್ತಿಯಿಂದ ಶ್ರೇಷ್ಠವಾದ ಷಡಕ್ಷರ ಮಂತ್ರದ ಅನುಷ್ಠಾನಮಾಡುವುದೇ ಮಾಹೇಶ್ವರಸ್ಥಲಕ್ಕೆ ಸಂಬಂಧಿಸುವುದು. ಅವಧಾನಭಕ್ತಿಯಿಂದ ಅಂಗದಲ್ಲಿರುವ ಲಿಂಗವನ್ನು ಹಸ್ತಪೀಠಕ್ಕೆ ಬರಮಾಡಿಕೊಳ್ಳುವುದು ಪ್ರಸಾದಿಸ್ಥಲಕ್ಕೆ ಸಂಬಂಧಿಸುವುದು. ಅನುಭವಭಕ್ತಿಯಿಂದ ವಿಧಿಗನುಸರಿಸಿ ಲಿಂಗಪೂಜೆಯನ್ನು ಮಾಡುವುದು ಪ್ರಾಣಲಿಂಗಿಸ್ಥಲಕ್ಕೆ ಸೇರಿದ ಕ್ರಿಯೆಯಾಗುವುದು. ಆನಂದಭಕ್ತಿಯಿಂದ ಅರ್ಪಣಕ್ರಿಯೆಯನ್ನು ಮಾಡುವುದೇ ಶರಣಸ್ಥಲಕ್ಕೆ ಸಂಬಂಧಿಸುವುದು. ಸಮರಸಭಕ್ತಿಯಿಂದ

ಕ್ರಿಯತೇ ಸರ್ವದಾ ಸೋಽಯಂ ವೀರಶೈವಾರ್ಚನಕ್ರಮಃ
ವೀರಶೈವನಿರುಕ್ತಿರ್ಯಾ ದ್ವಯಮೇವಾಧುನೋಚ್ಯತೇ ೩೦

ವಿಶಬ್ದೋಽತ್ರ ವಿಕಲ್ಪಾರ್ಥೋ ರಶಬ್ದೋ ರಹಿತಾರ್ಥಕಃ
ವಿಕಲ್ಪರಹಿತಂ ಶೈವಂ ವೀರಶೈವಮಿತಿ ಸ್ಮೃತಂ ೩೧

ಏಕಮೇವಾದ್ವಿತೀಯಂ ಯದವಿಕಲ್ಪಂ ಪರಂ ಪದಂ
ತದ್ವೀರಶೈವಮಿತ್ಯುಕ್ತಂ ನೇತರಂ ಸವಿಕಲ್ಪಕಂ ೩೨

ಏವಂ ಸಮಾಸತಃ ಪ್ರೋಕ್ತಃ ಶಿವಲಿಂಗಾರ್ಚನಕ್ರಮಃ
ಶಿವಾನುಭವಸೂತ್ರೇಽಸ್ಮಿಂಶ್ಶಿವಸಿದ್ಧಾಂತವರ್ತ್ಮನಿ ೩೩

---

ಲಿಂಗಾರ್ಪಿತಪ್ರಸಾದಭೋಗದಿಂದಾದ ತೃಪ್ತಿಯನ್ನು ಪಡೆಯುವುದೇ ಐಕ್ಯಸ್ಥಲಕ್ಕೆ ಸಂಬಂಧಿಸಿರುವುದು. ಹೀಗೆ ಷಡಂಗಸ್ಥಲಕ್ಕನುಸರಿಸಿ ಮಾಡುವುದೇ ವೀರಶೈವಲಿಂಗಾರ್ಚನೆಯೆನಿಸುವುದು

## ವೀರಶೈವ ಶಬ್ದಾರ್ಥ

ಸೂ. ೩೦. ೩೧. ೩೨. ವೀರಶೈವ ಶಬ್ದಾರ್ಥವು ದ್ವಿವಿಧವಾಗಿರುವುದು. (೩೦) ವೀರ ಶಬ್ದದಲ್ಲಿ - 'ವಿ' ಶಬ್ದವು ವಿಕಲ್ಪಾರ್ಥದಲ್ಲಿಯೂ 'ರ' ಶಬ್ದವು ರಹಿತಾರ್ಥದಲ್ಲಿಯೂ ಇರುವುದು. ಆದುದರಿಂದ ವಿಕಲ್ಪರಹಿತವಾದ ಶೈವವು ವೀರಶೈವವಾಗುವುದೆಂದು ವೀರಶೈವ ಶಬ್ದಾರ್ಥವಿರುವುದು. (೩೧) ಮತ್ತು ಯಾವುದು ವಿಕಲ್ಪರಹಿತವಾಗಿ ಒಂದೇ ಇದ್ದು ದ್ವಿತೀಯರಹಿತವಾದ ಶ್ರೇಷ್ಠಪದವೆನಿಸುವುದೋ ಆದು ವೀರಶೈವವೆಂದುಕ್ತವಾಗಿರುವುದು. ವೀರಶೈವೇತರವು ಸವಿಕಲ್ಪಕವೆನಿಸುವುದು. (೩೨)

ಸೂತ್ರ. ೩೩. ಶಿವಸಿದ್ಧಾಂತಮಾರ್ಗವೆನಿಸಿದ ಈ ಶಿವಾನುಭವಸೂತ್ರದಲ್ಲಿ ಹೀಗೆ ಸಂಕ್ಷಿಪ್ತವಾಗಿ ಶಿವಲಿಂಗಾರ್ಚನಕ್ರಮವು ಉಕ್ತವಾಗಿರುವುದು.

### ವಿಚಾರ

ಇಲ್ಲಿ ಉಕ್ತವಾಗಿರುವ ಶಿವಲಿಂಗಾರ್ಚನಕ್ರಮದಲ್ಲಿ ಪೂಜೋಪಚಾರಗಳ ಸಂಖ್ಯೆಯು ೩೬. ಈ ಸಂಖ್ಯಾನಿಯಮವು ಸಾಮಾನ್ಯವಾದುದು.

ಪೂಜಿಸುವವರ ಅನುಕೂಲವಿದ್ದಂತೆ ಪೂಜೋಪಚಾರಗಳ ಸಂಖ್ಯೆಯು ಕಡಿಮೆಯೂ ಇರಬಹುದು, ಹೆಚ್ಚಾಗಿಯೂ ಇರಬಹುದು. ಪೂಜಾವಿಧಿಯಲ್ಲಿ ಪೂಜೋಪಚಾರಗಳ ಸಂಖ್ಯೆಯು ಅನೇಕ ಪ್ರಕಾರವಾಗಿ ಉಕ್ತವಾಗಿರುವುದು. ಇಲ್ಲಿ ವೀರಶೈವರು ಪ್ರತಿದಿನವೂ ಲಿಂಗವನ್ನು ಪೂಜಿಸಬೇಕೆಂಬುದು ಮುಖ್ಯ; ಸಂಖ್ಯೆಯು ಮುಖ್ಯವಲ್ಲ. ಪೂಜಿಸುವವರ ಅನುಕೂಲಕ್ಕನುಸರಿಸಿ ಪೂಜೋಪಚಾರಗಳ ಸಂಖ್ಯೆಯು ವ್ಯತ್ಯಾಸವಾಗಬಹುದು. ಅದರಲ್ಲಿ ದೋಷವಿಲ್ಲ. ಆದರೆ ಪೂಜೋಪಚಾರಗಳ ದೃಷ್ಟಿಯಿಂದ ಲಿಂಗಕ್ಕೆ ಅರ್ಪಿತವಾಗುವ ದ್ರವ್ಯಗಳು ಶುದ್ಧವಾಗಿ ಪ್ರಸಾದರೂಪದಿಂದ ಪರಿಣಮಿಸುವವೆಂಬುದನ್ನು ಗಮನಿಸಬೇಕು. ಮತ್ತು ಉಪಚಾರದ ಸಂಖ್ಯೆಯಲ್ಲಿ ಸೇರಿರುವ ಯಜ್ಞೋಪವೀತಕ್ಕಾಗಿ ರುದ್ರಾಕ್ಷಮಾಲೆಯನ್ನು ಉಪಯೋಗಿಸುವುದೇ ಶರಣರ ಸಂಪ್ರದಾಯವಿರುವುದೆಂಬುದನ್ನು ಮರೆಯಲಾಗದು. ಇನ್ನು ಅಂತರಂಗದ ಪೂಜೆಗಾಗಿ ಹೇಳಿರುವ ಶಾಂತಿಯೇ ಜಲವೆಂಬುದಾದಿಯಾದ ಅಷ್ಟವಿಧಪೂಜಾಕ್ರಮವು ನಿಯಮಿತವಾದುದಲ್ಲ. ಈ ಕ್ರಮವು ಧಾರ್ಮಿಕ ವಾಙ್ಮಯದಲ್ಲಿ ಅನೇಕ ರೀತಿಯಿಂದ ವಿವರಿಸಲ್ಪಟ್ಟಿರುವುದುಂಟು. ಮುಖ್ಯವಾಗಿ ಈ ಕ್ರಮವು ಲಿಂಗಾರ್ಚಕನ ಶಾಂತಿ ಮೊದಲಾದ ಸದ್ಗುಣಗಳ ಸಾಮಗ್ರಿಯೇ ಪೂಜಾಸಾಮಗ್ರಿಯಾಗಬೇಕು; ಸದ್ಗುಣರಹಿತನಾದ ಲಿಂಗಾರ್ಚಕನ ಬಾಹ್ಯವಸ್ತುಗಳ ಪೂಜಾಸಾಮಗ್ರಿಯು ಫಲಕಾರಿಯಲ್ಲವೆಂಬುದನ್ನು ತಿಳಿಸಿಕೊಡುವುದಾಗಿರುವುದು. ಇನ್ನು ೨೬ ನೆಯ ಸೂತ್ರದಿಂದ ೩೦ ನೆಯ ಸೂತ್ರದ ವರೆಗೂ ಹೇಳಿರುವ ಷಟ್-ಸ್ಥಲಕ್ಕನುಸರಿಸಿದ ಲಿಂಗಾರ್ಚನದ ಸ್ವರೂಪವನ್ನು ಸೂತ್ರಕಾರನೇ ಮುಂದಿನ ಅಧಿಕರಣಗಳಲ್ಲಿ ವಿಶೇಷ ರೀತಿಯಿಂದ ವಿವರಿಸುವುದರಿಂದ ಅದರ ವಿಚಾರವನ್ನು ಇಲ್ಲಿ ಮಾಡಿಲ್ಲ.

ಗುರುವಿನಿಂದ ನಿರೂಪಿತವಾದ ಲಿಂಗಾರ್ಚನಕ್ರಮವನ್ನು ತಿಳಿದುಕೊಂಡ ಶಿಷ್ಯನು ಭಕ್ತಿಯಿಂದ ಲಿಂಗರೂಪನಾದ ಶಿವನನ್ನು ಕುರಿತು ವಂದನಪೂರ್ವಕವಾಗಿ ಪ್ರಾರ್ಥಿಸುವ ವಿಧಾನವು ಮುಂದೆ ಉಕ್ತವಾಗಿರುವುದು.

ನಮಸ್ತೇ ಷಟ್‌ಸ್ಥಲಬ್ರಹ್ಮಮೂರ್ತಯೇ ಶುಭಕೀರ್ತಯೇ
ಸ್ವಸಂವೇದ್ಯಾಯ ಹೃದ್ಯಾಯ ವಿದ್ಯಾರೂಪಾಯ ಶಂಭವೇ ೩೪

ನಮೋ ಲಿಂಗಾಂಗಸಂಬಂಧಷಡಾತ್ಮೈಕಸ್ವರೂಪಿಣೇ
ಷಟ್‌ಸ್ಥಲಬ್ರಹ್ಮಣೇ ಭಕ್ತಿಜ್ಞಾನಯೋಗಾಪ್ತವಸ್ತುನೇ ೩೫

ಪ್ರಕಾಶಶ್ಚ ಮುಖಂ ನಾಮ ಮೂರ್ತಿರಾನಂದ ಆತ್ಮನಃ
ಪ್ರಸನ್ನತೇತಿ ತೇ ಶಂಭೋ ಲಕ್ಷಣಂ ಷಡ್ವಿಧಂ ಭವೇತ್ ೩೬

ವೃತ್ತಂ ॥ ಭೂತಿಸ್ತೇ ಪರಮಪ್ರಕಾಶ ಉತ ರುದ್ರಾಕ್ಷಂ ತ್ವದೀಯಂ ಮುಖಂ
ಶ್ರೀಪಂಚಾಕ್ಷರಮಂತ್ರ ಏವ ಭವದೀಯಂ ದಿವ್ಯನಾಮ ಸ್ಫುಟಂ
ಲಿಂಗಂ ಮೂರ್ತಿರುಮಾಪತೇ ತವ ಪರಾನಂದಾಮೃತಂ ಪಾದುದಂ
ಪ್ರಾಸನ್ನಂ ತ್ವದಭೂತ್ಪ್ರಸಾದ ಇತಿ ಮೇ ಭಕ್ತಿರ್ಭಜತ್ಯಾಸ್ತಿಕೀ ೩೭

---

ಟಿಪ್ಪ :

ಸೂ. ೩೪. ಷಟ್‌ಸ್ಥಲಮೂರ್ತಿಯೂ, ಶುಭಕೀರ್ತಿಯೂ, ಸ್ವಸಂವೇದ್ಯನೂ, ಹೃದ್ಯನೂ, ವಿದ್ಯಾಸ್ವರೂಪನೂ ಆದ ಶಂಭುವೆ, ನಿನಗೆ ನಮುಸ್ಕಾರ.

ಸೂ. ೩೫. ಲಿಂಗಾಂಗಸಂಬಂಧದ ಆರು ಲಿಂಗಗಳ ಮತ್ತು ಆರು ಅಂಗಗಳ ಏಕಸ್ವರೂಪವುಳ್ಳವನೆ, ಷಟ್‌ಸ್ಥಲಬ್ರಹ್ಮಮೂರ್ತಿಯೆ, ಭಕ್ತಿಪೂರ್ವಕವಾದ ಜ್ಞಾನಯೋಗದಿಂದ ಪ್ರಾಪ್ತವಾಗುವ ಚಿದ್ವಸ್ತುವೆ, ನಿನಗೆ ನಮುಸ್ಕಾರ.

ಸೂ. ೩೬. ಶಂಭುವೆ ನಿನ್ನ ಸಂಬಂಧವಾದ ಪ್ರಕಾಶ, ಮುಖ, ನಾಮ, ಮೂರ್ತಿ, ಆನಂದ, ಆತ್ಮಪ್ರಸನ್ನತೆಯೆಂಬಿವೇ ನಿನ್ನ ಷಡ್ವಿಧ ಲಕ್ಷಣಗಳಾಗಿರುವವು.

ಸೂ. ೩೭. ಉಮಾಪತಿಯೆ, ವಿಭೂತಿಯನ್ನು ನಿನ್ನ ಪ್ರಕಾಶವೆಂದೂ, ರುದ್ರಾಕ್ಷವನ್ನು ನಿನ್ನ ಮುಖವೆಂದೂ, ಪಂಚಾಕ್ಷರಮಂತ್ರವನ್ನು ನಿನ್ನ ನಾಮವೆಂದೂ, ಇಷ್ಟಲಿಂಗವನ್ನು ನಿನ್ನ ಮೂರ್ತಿಯೆಂದೂ, ಶ್ರೇಷ್ಠವಾದ

ಅಯಮಯಮಿತಿ ಭಕ್ತಃ ಪಶ್ಯತಿ ತ್ವಾಂ ಚ ಸರ್ವಂ
ಪುರಹರ ನಿಜಭಕ್ತಿಜ್ಞಾನಯೋಗೇನ ಕಶ್ಚಿತ್
ತದಿದಮಪಿ ಸಮಸ್ತಂ ಮಾಯಿಕಜ್ಞಾನಯೋಗಾ-
ಚ್ಛಿವ ಇತಿಪರಿಪಶ್ಯತ್ಯಾತ್ಮಮೋಹಾತ್ತತೋಽನ್ಯಃ ೩೮

---

ನಿನ್ನ ಆನಂದಾಮೃತವನ್ನು ನಿನ್ನ ಪಾದೋದಕವೆಂದೂ, ಆತ್ಮಪ್ರಸನ್ನತೆಯನ್ನು ನಿನ್ನ ಪ್ರಸಾದವೆಂದೂ ನಂಬಿರುವ ನನ್ನ ಆಸ್ತಿಕಭಾವನದ ಭಕ್ತಿಯು ಪುರಹರನಾದ ನಿನ್ನನ್ನು ಭಜಿಸುವುದು.

ವಿಚಾರ

೩೬-೩೭ ನೆಯ ಸೂತ್ರಗಳಲ್ಲಿ ವೀರಶೈವರ ಅಷ್ಟಾವರಣಗಳ ಸ್ವರೂಪವು ಉಕ್ತವಾಗಿರುವುದು. ಆದರೆ, ಶಿವನ ನಾಲ್ಕನೆಯ ಲಕ್ಷಣವಾದ ಲಿಂಗ-ಮೂರ್ತಿಯು ಗುರು, ಲಿಂಗ, ಜಂಗಮವೆಂಬ ತ್ರಿವಿಧರೂಪಗಿಂದಿರುವು-ದೆಂದು ಭಾವಿಸಬೇಕು. ಆಗ ಮೇಲಿನ ಆರು ಲಕ್ಷಣಗಳಲ್ಲಿ ಗುರು-ಜಂಗಮರು ಸೇರಿ, ಅಷ್ಟಾಪರಣಗಳಾಗುವವು.

### ಮಾಯಾಯೋಗಜ್ಞಾನದ ಮತ್ತು ಭಕ್ತಿಯೋಗಜ್ಞಾನದ ಸ್ವರೂಪ

ಸೂ. ೩೮. ಪುರಹರ, ನಿನ್ನ ಭಕ್ತಿಯಿಂದುದ್ಭವಿಸಿದ ಜ್ಞಾನಯೋಗದಿಂದ ಭಕ್ತನಾದ ಯಾವನಾದರೂ ನಿನ್ನನ್ನೂ, ಚೇತನಾಚೇತನಾತ್ಮಕವಾದ ಜಗತ್ತನ್ನೂ ಕ್ರಮವಾಗಿ ಈತನು ಜಗದಾಕಾರವಾಗಿ ಪರಿಣಮಿಸದ ಶಿವನು, ಈತನು ಜಗದಾಕಾರವಾಗಿ ವ್ಯಕ್ತವಾಗಿರುವ ಶಿವನು - ಎಂದು ಅಯಮಯ ಮಿತಿ - ಈತನು - ಈತನು ಎಂಬ ದೃಷ್ಟಿಯಿಂದ ತಿಳಿಯುವನು. (ಸಾಕ್ಷಾ-ತ್ಕರಿಸಿಕೊಳ್ಳುವನು) ಭಕ್ತನಲ್ಲದ ಮಾಯಾವಾದಿಯಾದ ಮತ್ತೊಬ್ಬನು ತನ್ನ ಆತ್ಮತತ್ತ್ವಮೋಹದಿಂದುಂಟಾದ ಮಾಯಿಕಜ್ಞಾನಯೋಗದಿಂದ ಆತ್ಮತತ್ತ್ವವೂ ದೃಶ್ಯಮಾನವಾದೀ ಜಗತ್ತೂ ಶಿವಸ್ವರೂಪವು - ಎಂದರೆ ಶಿವಾಭಿನ್ನವು ಎಂದು ಪರೋಕ್ಷವಾಗಿ ತಿಳಿದುಕೊಳ್ಳುವನು.

ಮಾಯಾಯೋಗಜಜ್ಞಾನಾತ್ಸರ್ವಮಿದಂ ದೃಶ್ಯತೇ ಶಿವಃ ಕೋಽಪಿ
ಶಿವ ಏವ ಶಿವೋ ನಾನ್ಯಃ ಪ್ರದೃಶ್ಯತೇ ಭಕ್ತಿಯೋಗಜಜ್ಞಾನಾತ್ ೩೯

ಅನ್ಯಚಿಂತಾ ಭವೇತ್ಕಾಷ್ಠಂ ಶಿವಚಿಂತಾ ಹವಿರ್ಭವೇತ್
ನ ಕಾಷ್ಠಮಂತರಾ ವಹ್ನಿರ್ಜ್ಞಾನಾಗ್ನಿಸ್ತದ್ವದೀರಿತಃ ೪೦

ವೃತ್ತಂ ॥ ಮಾನಸವಾಚಿಕಕಾಯಿಕಕರ್ಮಾಣೀಧ್ಮಾನಿ ಪುಣ್ಯಪಾಪಾನಿ
ಶೈವಾನಿ ಹವೀಂಷಿ ಮಯಾ ಜ್ಞಾನಾಗ್ನೌ ಹೂಯತೇ
ಸದಾ ಹೋಮಃ ೪೧

---

ಸೂ. ೩೯. ಮಾಯಾವಾದಕ್ಕೆ ಸಂಬಂಧಿಸಿದ ಜ್ಞಾನಕ್ಕೆ ಮೊದಲು, ಜಗತ್ತು ಇದು - ಎಂಬ ರೂಪದಿಂದ ತೋರಿ, ಆಮೇಲೆ ಇದೆಲ್ಲವೂ ಒಬ್ಬ ಶಿವನ ಸ್ವರೂಪವೆಂದು ತೋರುವುದು. ಭಕ್ತಿಸಂಬಂಧದಿಂದುಂಟಾದ ಜ್ಞಾನಕ್ಕೆ ಇದೆಲ್ಲವೂ ಶಿವನೇ ಶಿವನಲ್ಲದೆ ಅನ್ಯವಿಲ್ಲವೆಂಬ ಪರಿಜ್ಞಾನವು ಮೊದಲಿಗೇ ಸಂಭವಿಸುವುದು.

ವಿಚಾರ

೩೮-೩೯ ಸೂತ್ರಗಳ ಅರ್ಥವು ಅಸ್ಫುಟವಾಗಿರುವುದೆಂದು ಕೆಲವರ ಅಭಿಪ್ರಾಯವಿರುವುದು. ಆದರೆ, ಈ ಸೂತ್ರಗಳೆರಡರಲ್ಲಿ - ಮಾಯಾವಾದಿಯ ದೃಷ್ಟಿಗೆ ಮೊದಲು ಜಗತ್ತು ತೋರಿದರೂ ಅದು ಮಿಥ್ಯವಾಗಿರುವುದರಿಂದ ಆ ಜಗತ್ತಿನಲ್ಲಿ ಶಿವಸ್ವರೂಪವೊಂದೇ ಸತ್ಯವಾಗಿ ತೋರುವುದೆಂದೂ, ವೀರಶೈವಭಕ್ತನ ದೃಷ್ಟಿಗೆ ಶಿವನೂ ಶಿವನ ಪರಿಣಾಮರೂಪವಾದ ಜಗತ್ತೂ ಸತ್ಯವಾದ ಶಿವಸ್ವರೂಪದಿಂದ ಕಾಣಿಸುವುದೆಂದೂ ತಾತ್ಪರ್ಯವಿರುವುದಾಗಿ ಗ್ರಹಿಸಲಾಗಿದೆ.

ಕರ್ಮಜ್ಞಾನಗಳ ಸ್ವರೂಪ

ಸೂ. ೪೦. ಶಿವಾತಿರಿಕ್ತವಾದ ಚಿಂತನವು ಕಾಷ್ಠಕ್ಕೆ ಸಮಾನವಾಗಿರುವುದು. ಶಿವಚಿಂತನವು ಹವಿಸ್ಸಿನ ರೂಪದಿಂದಿರುವುದು - ಎಂದರೆ - ಶಿವವಿಷಯಕ ಜ್ಞಾನಾಗ್ನಿಯಲ್ಲಿ ಅರ್ಪಿಸಲು ಯೋಗ್ಯವಾಗಿರುವುದು.

ಸೂ. ೪೧. ಮನೋವಾಕ್ಕಾಯಗಳಿಂದ ಉಂಟಾಗುವ ಪುಣ್ಯಪಾಪರೂಪವಾದ ಕರ್ಮಗಳು ಕಾಷ್ಠಗಳಾಗಿರುವವು. ಅವು ಶಿವಸಂಬಂಧವನ್ನು

ನಾಗ್ನಿಃ ಕಾಷ್ಠಂ ವಿನಾಸ್ತಿ ಕ್ವಚಿದಪಿ ನ ಸಮುದ್ಭೃತ್ಯತೇ ಸ ಚ ಕೋಽಪಿ
ಸ್ವಾಹಾಕಾರೈರ್ಹವಿರ್ಭಿರ್ನ ಚ ಪರಿಣಮತೇ ನೈತಿ ತೃಪ್ತಿಂ ತಥೈವ
ಜ್ಞಾನಾಗ್ನೌ ಶುಷ್ಕಮೇತತ್ತ್ರಿಕರಣಕೃತಮುದ್ಯತ್ಸಮಿದ್ದರ್ಭಪೂರ್ವಂ
ಪುಣ್ಯಂ ನಿಕ್ಷಿಪ್ಯ ಶೈವಂ ಪುರಹರ ನಿಜಭಕ್ತ್ಯಾ ಹವಿರ್ಹೂಯತೇ ವೈ ॥ ೪೨

ಯಚ್ಚೌರ್ಯಹಿಂಸಾಪರತಾದಿ ಕರ್ಮ ತತ್ಪಾಪಮೇತದ್ವಿಪರೀತಮನ್ಯತ್
ಭಕ್ತಿಕ್ರಿಯಾಚಾರವಿಶಿಷ್ಟಮಾರ್ಗಂ ನಿಃಶೃಂಖಲಂ
ಯತ್ತದಿತೀಹ ಶೈವಂ ೪೩

---

ಪಡೆದಾಗ ಹವಿಸ್ಸುಗಳಾಗಿ ಪರಿಣಮಿಸುವವು; ಅವನ್ನು ಶಿವಜ್ಞಾನಾಗ್ನಿಗೆ ಅರ್ಪಿಸಿ, ಯಾವಾಗಲೂ ಹೋಮ ಮಾಡುತ್ತಿರುವೆನು.

ಸೂ. ೪೨. ಕಟ್ಟಿಗೆಯಿಲ್ಲದೆ ಅಗ್ನಿಯುಂಟಾಗದು. ಮತ್ತು ವಿಸ್ತೃತ ವಾಗದು. ಆ ಅಗ್ನಿಯು ಸ್ವಾಹಾಕಾರಪೂರ್ವಕವಾದ ಹವಿಸ್ಸುಗಳಿಂದ ಜ್ವಲನರೂಪಪರಿಣಾಮವನ್ನು ಹೊಂದುವುದಿಲ್ಲ. ಮತ್ತು ತೃಪ್ತಿಯನ್ನೂ ಹೊಂದುವುದಿಲ್ಲ. ಹೀಗೆಯೇ ಜ್ಞಾನಾಗ್ನಿಯ ಸ್ಥಿತಿಯಿರುವದು. ಆದುದ ರಿಂದ ನಾನು ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಮಾಡಿದ ಶಿವಸಂಬಂಧಿಪುಣ್ಯಕರ್ಮವನ್ನು ಶುಷ್ಕವಾದ ಮತ್ತು ಶ್ರೇಷ್ಠ ಸಮಿದ್ದರ್ಭ-ಪೂರ್ವಕವಾದ ಹವಿಸ್ಸನ್ನಾಗಿ ಮಾಡಿ ಅದನ್ನು ಆಹುತಿಗೊಟ್ಟು, ಪುರಹರನೆ, ನಿಜಭಕ್ತಿಯಿಂದ ಹವನ ಮಾಡುವೆನು. ( ಈ ಸೂತ್ರಾರ್ಥವು ಸ್ಫುಟ ವಾಗಿಲ್ಲವೆಂಬ ಆಕ್ಷೇಪವೂ ಇರುವುದು. )

ಸೂ. ೪೩. ಕಳುವು, ಕೊಲೆ ಮೊದಲಾದ ಕರ್ಮವು ಪಾಪಕರ್ಮವು. ಈ ವಿಧವಾದ ಪಾಪಕರ್ಮರಹಿತವಾದುದು ಪುಣ್ಯಕರ್ಮವೆನಿಸುವುದು. ಆದರೆ, ಇಲ್ಲಿ ಶಿವಸಂಬಂಧಿಯಾದ ಯಾವ ಕರ್ಮವಿರುವುದೋ ಅದು ಭಕ್ತಿಕ್ರಿಯೆಯ ಆಚರಣದಿಂದ ಕೂಡಿದ ಮಾರ್ಗವಾಗಿದ್ದರೆ ನಿಃಶೃಂಖಲ ವೆನಿಸುವುದು. ( ಪಾಪಪುಣ್ಯಗಳ ನಿರ್ಬಂಧವಿಲ್ಲದಿರುವುದು. )

ನಿತ್ಯಂ ಸಮರ್ಪಣಕಲಾನಿಪುಣಂ ಪ್ರಸನ್ನಂ ಯದ್ಭಕ್ತಿರೂಪಮಚಲಂ
ನಿಜಭಾವಸಿದ್ಧಂ
ನಿರ್ಲೇಪಭೋಗರಸಿಕಂ ನಿರಹಂ ಮಮತ್ವಂ ತತ್ಕರ್ಮ ಶೈವ-
ಮುಭಯಾತಿಗಮಾಹುರಾರ್ಯಾಃ ೪೪

ಅಧಸ್ತಾಚ್ಚೋರ್ಧ್ವತಃ ಕೃತ್ವಾ ಪುಣ್ಯಪಾಪೇಂಧನದ್ವಯಂ
ನಿರ್ಮಥ್ಯೋತ್ಪನ್ನ ಚಿದ್ವಹ್ನಿಃ ಪುನಸ್ತೇನೈವ ನಿರ್ದಹೇತ್ ೪೫

ಯಥಾ ಕಾಷ್ಠೋದ್ಭವೋ ವಹ್ನಿಃ ಕಾಷ್ಠಮೇವ ವಿನಿರ್ದಹೇತ್
ತಥಾ ಕರ್ಮೋದ್ಭವಂ ಜ್ಞಾನಂ ಕರ್ಮೈವ ಪ್ರವಿನಾಶಯೇತ್ ೪೬

---

ಸೂ. ೪೪. ಯಾವ ಕರ್ಮದಲ್ಲಿ ಅಹಂಕಾರಮಮಕಾರಗಳಿಲ್ಲವೋ, ಯಾವ ಕರ್ಮವು ನಿಜಭಾವಸಿದ್ಧವಾದ ಅಚಲಭಕ್ತಿಮಯವಾಗಿರುವುದೋ, ಮತ್ತು ಯಾವ ಕರ್ಮದಲ್ಲಿ ನಿತ್ಯವೂ ಶಿವಾರ್ಪಣಕಲೆಯ ನೈಪುಣ್ಯವಿದ್ದು ನಿರ್ಲೇಪವಾದ ಶಿವಪ್ರಸಾದದ ಭೋಗರಸಿಕತೆಯಿರುವುದೋ, ಅದು ಪವಿತ್ರವಾದ ಶೈವಕರ್ಮವೆನಿಸುವುದು. ಆ ಶೈವ ಕರ್ಮವು ಪುಣ್ಯಪಾಪ ರೂಪವಾದ ಕರ್ಮದ್ವಯವನ್ನತಿಕ್ರಮಿಸಿರುವುದೆಂದು ಆರ್ಯರಾದ ಶಿವಾನುಭವಿಗಳು ಹೇಳುವರು.

ಸೂ. ೪೫. ಪುಣ್ಯಪಾಪರೂಪವಾದೆರಡು ಕಾಷ್ಠಗಳನ್ನು ಕೆಳಗೊಂದು ಮೇಲೊಂದಿಟ್ಟು, ಮಥನಮಾಡಿದರೆ ಜ್ಞಾನಾಗ್ನಿಯು ಹುಟ್ಟುವುದು. ಪುನಃ ಆ ಜ್ಞಾನಾಗ್ನಿಯೇ ಪುಣ್ಯಪಾಪರೂಪವಾದ ಕಾಷ್ಠದ್ವಯವನ್ನು ದಹಿಸಿಬಿಡುವುದು.

ಸೂ. ೪೬. ಕಾಷ್ಠದಿಂದ ಹುಟ್ಟಿದ ಅಗ್ನಿಯು ಕಾಷ್ಠವನ್ನು ಸುಟ್ಟುಬಿಡುವಂತೆ ಕರ್ಮದಿಂದ ಉದ್ಭವಿಸುವ ಜ್ಞಾನಾಗ್ನಿಯು ಕರ್ಮವನ್ನೇ ದಹಿಸಿಬಿಡುವುದು.

ವಿಚಾರ

ನಾನು ನನ್ನದೆಂಬ ಅಹಂಕಾರ ಮಮಕಾರಗಳ ಅಭಿಮಾನವುಳ್ಳವನಾಗಿ ಮಾಡುವವನ ಕರ್ಮವು ಪುಣ್ಯಪಾಪರೂಪವಾದ ಫಲಗಳನ್ನುಂಟು-

ವೃತ್ತಂ ॥ ನೈವಾಹಂ ಪುರುಷೋ ಗೃಹೀ ನ ಚ ವನೀ ನ ಬ್ರಹ್ಮಚಾರೀ ಯತಿ-
ರ್ನಾತ್ಯಾಶ್ರಮ್ಯಪಿ ಕಿಂ ಪುನಃ ಕೃತಕಮೇತತ್ ಸರ್ವಮಾಮನ್ಯತೇ
ಶ್ರೀಮಚ್ಛಾಂಭವಸತ್ಯಧರ್ಮಸುಲಭಃ ಪ್ರತ್ಯಕ್‌ಚಿದಾನಂದದೃಗ್
ಭಾಸ್ವತ್‌ಸ್ವಾತ್ಮಪರಾನುಭೂತಿರತಿಲೀಲಾಲೋಲಶೀಲೋಽಸ್ಮ್ಯಹಂ ೪೭

ನಿಜನಿಜೇಷು ಪದೇಷು ಪತಂತ್ವಿಮಾಃ ಕರಣವೃತ್ತಯ ಉಲ್ಲಸಿತಾ ಮಮ
ಕ್ಷಣಮಪೀಶ ಮನಾಗಪಿ ಮೈವ ಭೂತ್ತ್ವದವಿಭೇದರಸಕ್ಷತಿಸಾಹಸಃ ೪೮

ವಚನೇ ಚಲನೇ ವಿಲೋಕನೇ ಭವದರ್ಚಾದಿಷು ಸರ್ವಕರ್ಮಸು
ಅಲಸತ್ವಮಲಂ ವಿಭೂಷಣಂ ಭಗವನ್ ಭಕ್ತಿಮತೋಽನುಜೀವಿನಃ ೪೯

---

ಮಾಡುವುದು. ಕರ್ತೃವೂ ಭೋಕ್ತೃವೂ ಶಿವನೆಂದು ತಿಳಿದು, ಶಿವಭಕ್ತ ನಾಗಿ ತಾನು ಮಾಡುವ ಕರ್ಮಫಲವನ್ನು ಶಿವಾರ್ಪಿತಮಾಡಿ ಅದನ್ನು ಪ್ರಸಾದರೂಪವಾಗಿ ಭೋಗಿಸುವವನಿಗೆ ಪಾಪಪುಣ್ಯಗಳ ಸಂಬಂಧ ವುಂಟಾಗುವುದಿಲ್ಲ. ಈ ವಿಧವಾದ ಶಿವಾರ್ಪಣಜ್ಞಾನವಹ್ನಿಯು ಕರ್ಮಗಳನ್ನು ದಹಿಸುವುದು "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮ ಸ್ಯಾತ್ಕುರುತೇಽರ್ಜುನ" ಎಂಬ ಗೀತೋಕ್ತಿಯಾದರೂ ಇದೇ ಅಭಿಪ್ರಾಯ ವನ್ನು ಪುಷ್ಟೀಕರಿಸುವುದು. ಶಿವಾರ್ಪಣಜ್ಞಾನದ ಸ್ವರೂಪವನ್ನು ಮುಂದಿನ ಅಧಿಕರಣದಲ್ಲಿ ಸೂತ್ರಕಾರನು ವಿಸ್ತಾರವಾಗಿ ನಿರೂಪಿಸಿರುವನು.

## ಶಿವಾರ್ಪಣ ತತ್ತ್ವಜ್ಞಾನಿಯ ವರ್ತನ

ಸೂ. ೪೭. ಪುರುಷಪದವಾಚ್ಯನಾದ ನಾನು ಗೃಹಸ್ಥನೂ ಅಲ್ಲ, ವಾನ ಪ್ರಸ್ಥನೂ ಅಲ್ಲ, ಬ್ರಹ್ಮಚಾರಿಯೂ ಅಲ್ಲ, ಸನ್ಯಾಸಿಯೂ ಅಲ್ಲ, ಅತ್ಯಾಶ್ರಮಿ ಯೂ ಅಲ್ಲ. ಮತ್ತೇನೆಂದರೆ, ಆಶ್ರಮಾದಿಧರ್ಮವೆಲ್ಲವೂ ಕೃತ್ರಿಮವು. ಈ ಕೃತ್ರಿಮ ಧರ್ಮದಿಂದ ದೂರನಾದ ನಾನು ಶ್ರೀಶಂಕರನ ಸತ್ಯಧರ್ಮ ದಿಂದ ಸುಲಭವಾದ ಆತ್ಮಜ್ಞಾನಾನಂದದಲ್ಲಿ ದೃಷ್ಟಿಯುಳ್ಳವನಾಗಿ ಪ್ರಕಾಶ ಮಾನವಾದ ಸ್ವಾತ್ಮಾನುಭವರತಿಯ ಲೀಲೆಯಲ್ಲಿರುವ ಆಸಕ್ತಿಯೇ ಶೀಲ ವಾಗುಳ್ಳವನಾಗಿರುವೆನು.

ಸೂ. ೪೮ ರಿಂದ ೪೯. ಈಶನೆ, ನನ್ನ ಇಂದ್ರಿಯ ವ್ಯಾಪಾರಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಉಲ್ಲಾಸದಿಂದ ವರ್ತಿಸಲಿ. ಆದರೆ, ನಿನ್ನೊಡನೆ

ಆತ್ಮಾತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ ೫೦

ಆತ್ಮೇಶೈಕ್ಯವಿಭಾಗಶೀಲಿನಿ ಪರೇ ಭಕ್ತ್ಯಾಂಗಕೇ ತ್ವಾಮಹಂ
ಯಾಚೇ ಕಂ ಚಿದಿಮಂ ವರಂ ತವ ನ ಚಾಶಕ್ಯಂ ಕಿಮಪ್ಯಸ್ತಿ ಹಿ
ಯದ್ದೇಹೇಂದ್ರಿಯಗೋಚರೈಃ ಸಹಚರೈಃ ಸಾರ್ಧಂ ಮಯಾ ಕ್ರೀಡಿತಂ
ತಾತ ತ್ವಂ ನಿಜಪುತ್ರಶೈಶವರಸಸ್ನೇಹೇನ ಸಂಪ್ರೀಯ ತಾಂ ೫೧

---

ಉಂಟಾದ ಸಾಮರಸ್ಯಸುಖಕ್ಷತಿಯಾಗುವ ಸಾಹಸವು ಮಾತ್ರ ಒಂದು ಕ್ಷಣವಾದರೂ ಕಿಂಚಿತ್ತಾದರೂ ಪ್ರಾಪ್ತವಾಗದಿರಲಿ (೪೮). ಭಗವಂತನೆ, ನಿನ್ನ ಭಕ್ತನೂ ದಾಸನೂ ಆದ ನನಗೆ ನಿನ್ನ ವಿಷಯಕವಾಗಿರುವ ವಚನ ಗಮನ ದರ್ಶನಗಳಲ್ಲಿ ಮತ್ತು ನಿನ್ನ ಪೂಜಾದಿಸಕಲಕರ್ಮಗಳಲ್ಲಿ ಪ್ರಾಪ್ತವಾಗುವ ಆಲಸ್ಯವು (ದಣಿವು) ಸಾಕು. ಅದೇ ಭೂಷಣವು. ಎಂದರೆ, ಇತರ ಕಾರ್ಯಗಳಲ್ಲಿ ಪ್ರವೃತ್ತಿಯಾಗದಿರಲೆಂದು ತಾತ್ಪರ್ಯ (೪೯).

ಸೂ. ೫೦. ಶಂಭುವೆ, ನನ್ನಾತ್ಮಸ್ವರೂಪನೇ ನೀನು. ನನ್ನ ಬುದ್ಧಿಯೇ ಪಾರ್ವತಿಯು. ನನ್ನ ಪ್ರಾಣಗಳೇ ನಿನ್ನ ಸೇವಕರು. ನನ್ನ ಶರೀರವೇ ನಿನ್ನ ಮಂದಿರವು. ನನ್ನ ವಿಷಯೋಪಭೋಗಕ್ರಿಯೆಯೇ ನಿನ್ನ ಪೂಜೆ. ನನ್ನ ನಿದ್ರೆಯೇ ಶಿವಸಮಾಧಿಸ್ಥಿತಿಯು. ನನ್ನ ಪಾದಸಂಚಾರವೇ ನಿನಗೆ ಮಾಡುವ ಪ್ರದಕ್ಷಿಣ. ನನ್ನ ಮಾತುಗಳೆಲ್ಲವೂ ನಿನ್ನ ಸ್ತೋತ್ರಗಳು. ಯಾವ ಯಾವ ಕ್ರಿಯೆಗಳನ್ನು ನಾನು ಮಾಡುವೆನೋ ಅವೆಲ್ಲವೂ ನಿನ್ನ ಆರಾಧನೆ.

ಸೂ. ೫೧. ಪೂಜಕದೃಷ್ಟಿಯಿಂದ ಲಿಂಗಾಂಗಗಳೈಕ್ಯವನ್ನು ವಿಭಾಗಿಸುವ ಶೀಲವುಳ್ಳ ಶ್ರೇಷ್ಠವಾದ ಭಕ್ತಿಯ ಅಂಗಸ್ಥಲದಲ್ಲಿದ್ದು, ತಂದೆಯಾದ ಶಿವನೆ ನಿನ್ನನ್ನು ಇದೊಂದು ವರವನ್ನು ಬೇಡುವೆನು. ನಿನಗೆ ಅಶಕ್ಯವಾದುದಿಲ್ಲವಲ್ಲವೆ? ನನ್ನ ಒಡನಾಡಿಗಳಂತಿರುವ ದೇಹೇಂದ್ರಿಯ ವಿಷಯಗಳೊಡನೆ

ಪ್ರಭುಃ ಸ್ವತಂತ್ರೋಽಪ್ರಭುರಸ್ವತಂತ್ರಃ ಪ್ರಭುರ್ಯದೇವೇಚ್ಛತಿ
ತತ್ಕರೋಽಮಿ

ಪುಣ್ಯಂ ಚ ಪಾಪಂ ಚ ನಿಜೇಚ್ಛಯಾ ಹಿ ದ್ವಯೋರ್ನಕರ್ತಾ
ಪ್ರಭುರಸ್ವತಂತ್ರಃ ೫೨

ಇಚ್ಛಾಜ್ಞಾನಕ್ರಿಯಾಶಕ್ತಿತ್ರಯಂ ಯಸ್ಯಾಸ್ತಿ ಸ ಪ್ರಭುಃ
ಸ್ವತಂತ್ರಸ್ತ್ವ ದಧೀನೋಽಯಮಸ್ವತಂತ್ರೋಽಹಮಪ್ರಭುಃ ೫೩

ವೃತ್ತಂ ॥ ಇಚ್ಛತಿ ಜಾನಾತೀದಂ ಕರೋತಿ ಸಕಲಂ ಶುಭಾಶುಭಂ ಕರ್ಮ
ಇಚ್ಛಾಜ್ಞಾನಕ್ರಿಯಯಾ ಶಕ್ತ್ಯಾ ಶಿವ ಏವ ನಾಹಮಿತಿ ಸತ್ಯಂ ೫೪

---

ನಾನು ಕ್ರೀಡಿಸುವುದನ್ನು ನೀನು ನಿನ್ನ ಪುತ್ರನ ಬಾಲ್ಯಕ್ರೀಡೆಯಲ್ಲಿಟ್ಟ ಸ್ನೇಹದೃಷ್ಟಿಯಿಂದ ಪ್ರೀತಿಸು. (ಇದೇ ನಾನು ಕೇಳುವ ವರವು)

ಸೂ. ೫೨. ಸ್ವತಂತ್ರನು ಪ್ರಭುವೆನಿಸುವನು. ಸ್ವತಂತ್ರರಹಿತನು ಪ್ರಭುವೆನಿಸಲಾರನು. ಪ್ರಭುವು ಯಾವುದನ್ನಿಚ್ಛಿಸುವನೋ, ಅದನ್ನೇ ಮಾಡುವೆನು. ಪುಣ್ಯಪಾಪಗಳು ಪ್ರಭುವಿನಿಚ್ಛೆಯಿಂದ ಸಂಭವಿಸುವವು. ಆದುದರಿಂದ ನಾನು ಆ ಪುಣ್ಯಪಾಪಗಳ ಕರ್ತನಲ್ಲ. ಅಸ್ವಂತಂತ್ರನೂ ಅಪ್ರಭುವೂ ಇರುವೆನು.

ಸೂ. ೫೩. ಯಾವಾತನಿಗೆ ಇಚ್ಛಾ-ಜ್ಞಾನ-ಕ್ರಿಯಾಶಕ್ತಿಗಳಿರುವವೋ ಆತನೇ ಪ್ರಭುವೂ ಸ್ವತಂತ್ರನು. ಅಸ್ವತಂತ್ರನೂ ಅಪ್ರಭುವೂ ಆದ ಈ ನಾನು ಆ ಪ್ರಭುವಿನ ಧೀನನು.

ಸೂ. ೫೪. ಪ್ರಭುವಾದ ಶಿವನೇ ತನ್ನ ಇಚ್ಛಾಜ್ಞಾನಕ್ರಿಯಾಶಕ್ತಿಗಳಿಂದ ಶುಭಾಶುಭವಾದ ಸಕಲಕರ್ಮಗಳನ್ನು ಇಚ್ಛಿಸಿ, ತಿಳಿದು, ಮಾಡುತ್ತಾನೆ. ನಾನು ಪ್ರಭುವಲ್ಲವೆಂಬುದು ಸತ್ಯ.

ಶಕ್ತಿಮಾನೇವ ಶಕ್ತಃ ಸ್ಯಾದಶಕ್ತಃ ಸ್ಯಾದಶಕ್ತಿಮಾನ್
ಶಕ್ತಃ ಕರೋತಿ ಸಕಲಮಶಕ್ತಃ ಕಿಂ ಕರಿಷ್ಯತಿ ೫೫

ವೃತ್ತಂ ॥ ಇಚ್ಛಾಶಕ್ತ್ಯಾ ತ್ವಮೀಶೋ ಭವಸಿ ಸಕಲಮೇವೇಚ್ಛಸಿ
ಜ್ಞಾನಶಕ್ತ್ಯಾ
ಜ್ಞಾತಂ ಜಾನಾಸಿ ಶಂಭೋ ನಿಖಿಲಮಪಿ ಕರೋಷಿ
ಕ್ರಿಯಾಶಕ್ತಿಯುಕ್ತಃ
ಕರ್ತಾ ಸರ್ವಂ ಚ ಕರ್ಮಾಶುಭಶುಭವಿಹಿತಂ ತತ್ಫಲಂ
ಚಾಸಿ ಭೋಕ್ತಾ
ಸ್ವಾಂತತ್ರ್ಯಾಚ್ಚ ಪ್ರಭುತ್ವಾದ್ಧಸಸಿ ಪುನರಲೇಪಃ ಸಲೇಪಶ್ಚ ನಾಹಂ ೫೬

ತ್ವತ್ಪ್ರೇರಿತಃ ಸಕಲಕರ್ಮಕರೋಮಿ ಕರ್ತಾ ನಾಹಂ ನ ತಸ್ಯ
ಫಲಭುಕ್ ಪರತಂತ್ರಭಾವಾತ್
ಭೃತ್ಯಾಪರಾಧ ಇಹ ಯದ್ವದುಮೇಶ ದಂಡಃ ಸ್ಯಾತ್ಸ್ವಾಮಿನಸ್ತವ
ಮಯಾ ಕೃತಮೇವ ತದ್ವತ್ ೫೭

---

ಸೂ. ೫೫. ಶಕ್ತಿಯುಳ್ಳವನೇ ಶಕ್ತನು. ಶಕ್ತಿಯಿಲ್ಲದವನು ಅಶಕ್ತನು. ಶಕ್ತನೇ ಸರ್ವವನ್ನು ಮಾಡುವವನು. ಅಶಕ್ತನೇನು ಮಾಡುವನು ?

ಸೂ. ೫೬. ಶಂಭುವೆ, ನೀನು ನಿನ್ನ ಇಚ್ಛಾಶಕ್ತಿಯಿಂದ ಈಶ್ವರನೆನಿಸಿರುವಿಯಲ್ಲವೆ; ಮತ್ತು ಸರ್ವವನ್ನು ಹೀಗಾಗಬೇಕೆಂದು ಇಚ್ಛಿಸುವೆ. ಇಚ್ಛೆಯಂತಾದ ಸಕಲವನ್ನೂ ಜ್ಞಾನಶಕ್ತಿಯಿಂದ ತಿಳಿದುಕೊಳ್ಳುವೆ, ತಿಳಿದುದೆಲ್ಲವನ್ನೂ ಕ್ರಿಯಾಶಕ್ತಿಯುಕ್ತನಾಗಿ ಮಾಡುತ್ತಿರುವೆ, ಆದುದರಿಂದ ಸಕಲ ಶುಭಾಶುಭಕರ್ಮದ ಕರ್ತೃವೂ ಭೋಕ್ತೃವೂ ನೀನೇ. ಮತ್ತು ಸ್ವತಂತ್ರ ಪ್ರಭುವಾದುದರಿಂದ ಎಲ್ಲವನ್ನೂ ನೋಡಿ ನಗೆಯಾಡುವೆ, ನನಗೆ ಕರ್ಮದ ಲೇಪಾಲೇಪಗಳಿಲ್ಲ.

ಸೂ. ೫೭. ಉಮಾಪತಿಯೆ, ನಿನ್ನಧೀನನಾದ ನಾನು ನಿನ್ನಿಂದ ಪ್ರೇರಿತನಾಗಿ ಸಕಲಕರ್ಮವನ್ನು ಮಾಡುವೆನು. ಆ ಕರ್ಮದ ಕರ್ತೃವೂ ಭೋಕ್ತೃವೂ ನಾನಲ್ಲ. ಈ ವಿಷಯದಲ್ಲಿ " ಭೃತ್ಯಾಪರಾಧಃ ಸ್ವಾಮಿನೋ

ಸ್ವತಂತ್ರಶ್ಚೇದಹಂ ಶಂಭೋ ಮಮ ಭೀತಿರ್ನ ಕಾಪಿ ಹಿ
ಕರೋಮಿ ಪುಣ್ಯಪಾಪಾನಿ ಸಂಹರಾಮ್ಯಾತ್ಮಲೀಲಯಾ ೫೮

ಅತೋ ಜ್ಞಾತ್ವಾ ಪಾರತಂತ್ರ್ಯಾತ್ ಸ್ವಾತಂತ್ರ್ಯಾದಪಿ ಮೇ ಪ್ರಭೋ
ಪುಣ್ಯಪಾಪಾದಿಕಂ ಕಿಂಚಿದಪಿ ನಾಸ್ತೀತಿ ಸೂನೃತಂ ೫೯

ತಸ್ಮಾತ್ಪುಣ್ಯಂ ಚ ಪಾಪಂ ಚ ಸ್ವರ್ಗಶ್ಚಾಪಿ ಚ ದುರ್ಗತಿಃ
ಬಂಧಶ್ಚಾಪಿ ವಿಮೋಕ್ಷಶ್ಚ ತವೈವ ನ ಮಮ ಪ್ರಭೋ ೬೦

ಇದಂ ಪುಣ್ಯಮಿದಂ ಪಾಪಮಿತಿ ಯಃ ಕೃತವಾನ್ ಪುರಾ
ಅಭಾವೇ ತದದ್ವಿಯೋಃ ಕರ್ತಾ ಸ ಏವಾಯಂ ಕ ಉಚ್ಯತಾಂ ೬೧

---

ದಂಡಃ" (ಆಳಿನ ತಪ್ಪಿನ ಫಲ ಒಡೆಯನಿಗೆ) — ಎಂಬಂತೆ ನಾನು ಮಾಡಿದುದು ಏನೇ ಇರಲಿ ನಿನಗೆ ಸಂಬಂಧಿಸಿರುವುದು.

ಸೂ. ೫೮, ೫೯. ಶಂಭುವೆ, ನಾನು ಸ್ವತಂತ್ರನಾದ ಪಕ್ಷದಲ್ಲಿ ಯಾವ ಭಯವೂ ಇಲ್ಲ; ಆತ್ಮಲೀಲೆಯಿಂದ ಪಾಪಪುಣ್ಯಗಳನ್ನು ಮಾಡುವೆನು. ಪುನಃ ಅವುಗಳನ್ನು ನಾಶಮಾಡುವೆನು. ಹೀಗೆ ತಿಳಿದುಕೊಂಡಿರುವ ನನಗೆ ಪರತಂತ್ರತೆಯಿಂದಾದರೂ ಸ್ವತಂತ್ರತೆಯಿಂದಾದರೂ ಮಾಡಿದ ಪುಣ್ಯ ಪಾಪಾದಿ ಕರ್ಮದ ಸಂಬಂಧವು ಕಿಂಚಿತ್ತಾದರೂ ಇಲ್ಲವೆಂಬುದು ನಿಜ.

ಸೂ. ೬೦. ಆದುದರಿಂದ ಪ್ರಭುವೆ, ಪುಣ್ಯ, ಪಾಪ, ಸ್ವರ್ಗ, ನರಕ, ಬಂಧ, ಮೋಕ್ಷ — ಇವುಗಳ ಸಂಬಂಧವೇ ನನಗಿರುವುದಿಲ್ಲ.

ಸೂ. ೬೧. ಪೂರ್ವದಲ್ಲಿ ಇದು ಪುಣ್ಯವಿದು ಪಾಪವೆಂದು ಯಾವಾತನು ಮಾಡಿರುವನೋ ಆತನೇ ಅವುಗಳಿಲ್ಲದಂತೆ ಮಾಡಲು ಕರ್ತನು. ಈ ವಿಷಯದಲ್ಲಿ ನಾನು ಯಾವನು ? ಹೇಳು ಸ್ವಾಮಿ.

ಅಹೋರಾತ್ರಿವಿವೇಕಸ್ತು ಜಾತ್ಯಂಧಸ್ಯ ಯಥಾ ನ ಹಿ
ಪುಣ್ಯಪಾಪವಿವೇಕೋಽಪಿ ಜಾತ್ಯಜ್ಞಸ್ಯ ನ ಮೇ ತಥಾ ೬೨

ಪಾರತಂತ್ರ್ಯಮಿದಂ ಭಕ್ತ್ಯಾ ಮಯಾ ಗುರುಪದೇಽರ್ಪಿತಂ
ತತ್ಪ್ರಸಾದಪ್ರಭಾವೇನ ನ ಕೋಽಪ್ಯಹಮಿತಿ ಸ್ಥಿತಿಃ ೬೩

ವೃತ್ತಂ ॥ ಜಾನಾತಿ ಸೋಮೇಶ್ವರ ಏವ ನಾಹಂ
ಮದೀಯಮಾಮುಷ್ಮಿಕಮೈಹಿಕಂ ಚ
ಸರ್ವಂ ಚ ಜಾನಾಮಿ ಕಿಮಪ್ಯನೇನ ಜ್ಞಾತೃತ್ವಮೀಶಸ್ಯ
ನ ಮೇಽಸ್ತಿ ನೈಜಂ ೬೪

---

ಸೂ. ೬೨. ಹೇಗೆ ಜಾತ್ಯಂಧನಿಗೆ ಹಗಲು ರಾತ್ರಿಗಳ ವಿವೇಕವಿಲ್ಲವೋ ಹಾಗೆ ಜಾತ್ಯಜ್ಞನಾದ ನನಗೆ ಪುಣ್ಯಪಾಪವಿವೇಕವಾದರೂ ಇಲ್ಲ ಸ್ವಾಮಿ.

ಸೂ ೬೩. ನಾನು ನನ್ನ ಪರಶಂತ್ರತೆಯನ್ನು ಭಕ್ತಿಯಿಂದ ಗುರುಚರಣ ದಲ್ಲಿ ಅರ್ಪಿಸಿರುವೆನು. ತದ್ಗುರುಪ್ರಸಾದಪ್ರಭಾವದಿಂದ ನಾನು ಯಾವನೂ ಅಲ್ಲವೆಂಬ ಸ್ಥಿತಿಯುಂಟಾಗಿರುವುದು.

ಸೂ. ೬೪. ನನಗೆ ಸಂಬಂಧಿಸಿದ ಐಹಿಕ ಪಾರಲೌಕಿಕಗಳನ್ನು ಸೋಮೇಶ್ವರನೇ ತಿಳಿದುಕೊಳ್ಳುವನು. ಅವುಗಳನ್ನು ನಾನು ತಿಳಿಯ ಲಾರೆನು. ಏಕೆಂದರೆ ಎಲ್ಲವನ್ನೂ ನಾನೂ ತಿಳಿಯುವೆನು. ಆದರೆ ಆ ಜ್ಞಾತೃತ್ವವು ನನ್ನದಲ್ಲ ಶಿವನದೆಂಬುದು ನಿಜ.

ವಿಚಾರ

ಶಿವಾರ್ಪಣಜ್ಞನಾದ ಭಕ್ತನು ಶಿವಾರ್ಪಿತಬುದ್ಧಿಯಿಂದ ಶಿವನಿಗಾಗಿ ಮಾಡುವ ಕ್ರಿಯೆಗಳ ಕರ್ತೃವೂ ತಾನಲ್ಲ, ಸಾಕ್ಷಿಯೂ ತಾನಲ್ಲ, ಶಿವನೇ ಕರ್ತೃವೂ ಸಾಕ್ಷಿಯೂ ಆಗಿರುವನೆಂದು ವರ್ತಿಸುವನು. ಇದೇ ವೀರಶೈವ ಭಕ್ತಿಮಾರ್ಗ. ಇದು ಕ್ರಿಯಾಕರ್ತೃತ್ವವನ್ನು ವಹಿಸುವ ಕರ್ಮಮಾರ್ಗ ವಲ್ಲ; ಸರ್ವಕ್ಕೂ ಸಾಕ್ಷಿಯೆಂಬ ಜ್ಞಾನಮಾರ್ಗವೂ ಅಲ್ಲವೆಂಬುದನ್ನು ಗ್ರಹಿಸಬೇಕು.

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೬೫

ಇತಿ ಶ್ರೀ ಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ಶಿವಲಿಂಗಾರ್ಚನಕ್ರಮೋ ನಾಮ
ದ್ವಿತೀಯಾಧಿಕರಣಂ
ಸಂಪೂರ್ಣಂ

---

ಸೂ. ೬೫. ಪರಾನುಭವಸೂತ್ರೋಕ್ತವಾಗಿರುವ ಪರಮಾರ್ಥಪದವಾದ ಈ ವಿಷಯವನ್ನು ಯಾವಾತನು ತಿಳಿದು ಆಚರಿಸುವನೋ; ಆತನೇ ಆಚಾರ್ಯಶ್ರೇಷ್ಠನಾಗಿ ವಿಭುವೆನಿಸುವನು.

ಇಂತು ಶ್ರೀ ಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ಶಿವಲಿಂಗಾರ್ಚನಕ್ರಮವೆಂಬ
ದ್ವಿತೀಯಾಧಿಕರಣಂ
ಸಂಪೂರ್ಣಂ

॥ ಶ್ರೀಗುರುಲಿಂಗಜಂಗಮೇಭ್ಯೋ ನಮಃ ॥

## ತೃತೀಯೊಧಿಕರಣೇ ಪ್ರಸಾದಸದ್ಭಾವಃ

ಗುರು. ಃ

ಅಥಾನುಭವಸೂತ್ರೇಽಸ್ಮಿನ್ ಪುರಾ ಶಿವಮುಖೋದಿತಂ
ಶ್ರೀಮತ್ಪ್ರಸಾದಸದ್ಭಾವನಿರೂಪಣಮಹಂ ಬ್ರುವೇ ೧

ಜಗಜ್ಜೀವೇಶ್ವರಾಣಾಂ ತು ತ್ರಯಾಣಾಂ ತತ್ತ್ವನಿರ್ಣಯಃ
ಉಚ್ಛಿಷ್ಟಾನ್ನಪ್ರಸಾದೇಷು ತ್ರಿಷು ನಿರ್ಣೀಯತೇ ಕ್ರಮಾತ್ ೨

---

ಗುರು. ಸೂ. ೧. ದ್ವಿತೀಯಾಧಿಕರಣದ ವಿಷಯಪ್ರತಿಪಾದನದ ಅನಂತರದಲ್ಲಿ ಈ ಅನುಭವಸೂತ್ರನಾಮಕ ಗ್ರಂಥದಲ್ಲಿ ನಾನು ಪೂರ್ವದಲ್ಲಿ ಶಿವನು ಹೇಳಿರುವ ಶ್ರೀಮತ್ಪ್ರಸಾದಸದ್ಭಾವದ ಸ್ವರೂಪವನ್ನು ನಿರೂಪಿಸುವೆನು.

ಸೂ. ೨. ಜಗತ್ತು, ಜೀವ, ಈಶ್ವರ - ಈ ಮೂರರ ತತ್ತ್ವನಿರ್ಣಯವು ಕ್ರಮವಾಗಿ - ಉಚ್ಛಿಷ್ಟ - ಅನ್ನ - ಪ್ರಸಾದವೆಂಬ ಮೂರರಲ್ಲಿ ನಿರ್ಣಯಿಸಲ್ಪಡುವುದು.

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೬೫

ಇತಿ ಶ್ರೀ ಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ಶಿವಲಿಂಗಾರ್ಚನಕ್ರಮೋ ನಾಮ
ದ್ವಿತೀಯಾಧಿಕರಣಂ
ಸಂಪೂರ್ಣಂ

---

ಸೂ. ೬೫. ಪರಾನುಭವಸೂತ್ರೋಕ್ತವಾಗಿರುವ ಪರಮಾರ್ಥಪದವಾದ ಈ ವಿಷಯವನ್ನು ಯಾವಾತನು ತಿಳಿದು ಆಚರಿಸುವನೋ; ಆತನೇ ಆಚಾರ್ಯಶ್ರೇಷ್ಠನಾಗಿ ವಿಭುವೆನಿಸುವನು.

ಇಂತು ಶ್ರೀ ಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ಶಿವಲಿಂಗಾರ್ಚನಕ್ರಮವೆಂಬ
ದ್ವಿತೀಯಾಧಿಕರಣಂ
ಸಂಪೂರ್ಣಂ

॥ ಶ್ರೀಗುರುಲಿಂಗಜಂಗಮೇಭ್ಯೋ ನಮಃ ॥

## ತೃತೀಯಾಧಿಕರಣೇ ಪ್ರಸಾದಸದ್ಭಾವಃ

ಗುರು. ೩

ಅಥಾನುಭವಸೂತ್ರೇಽಸ್ಮಿನ್ ಪುರಾ ಶಿವಮುಖೋದಿತಂ
ಶ್ರೀಮತ್ಪ್ರಸಾದಸದ್ಭಾವನಿರೂಪಣಮಹಂ ಬ್ರುವೇ ೧

ಜಗಜ್ಜೀವೇಶ್ವರಾಣಾಂ ತು ತ್ರಯಾಣಾಂ ತತ್ತ್ವನಿರ್ಣಯಃ
ಉಚ್ಛಿಷ್ಟಾನ್ನಪ್ರಸಾದೇಷು ತ್ರಿಷು ನಿರ್ಣೀಯತೇ ಕ್ರಮಾತ್ ೨

---

ಗುರು. ಸೂ. ೧. ದ್ವಿತೀಯಾಧಿಕರಣದ ವಿಷಯಪ್ರತಿಪಾದನದ ಅನಂತರದಲ್ಲಿ ಈ ಅನುಭವಸೂತ್ರನಾಮಕ ಗ್ರಂಥದಲ್ಲಿ ನಾನು ಪೂರ್ವದಲ್ಲಿ ಶಿವನು ಹೇಳಿರುವ ಶ್ರೀಮತ್ಪ್ರಸಾದಸದ್ಭಾವದ ಸ್ವರೂಪವನ್ನು ನಿರೂಪಿಸುವೆನು.

ಸೂ. ೨. ಜಗತ್ತು, ಜೀವ, ಈಶ್ವರ - ಈ ಮೂರರ ತತ್ತ್ವನಿರ್ಣಯವು ಕ್ರಮವಾಗಿ - ಉಚ್ಛಿಷ್ಟ - ಅನ್ನ - ಪ್ರಸಾದವೆಂಬ ಮೂರರಲ್ಲಿ ನಿರ್ಣಯಿಸಲ್ಪಡುವುದು.

ಶರೀರಾದಿಜಗದ್ರೂಪಮುಚ್ಛಿಷ್ಟಂ ಭ್ರಾಂತಿಲಕ್ಷಣಂ
ಅನ್ನಂ ತದಭಿಮಾನೀ ಸ್ಯಾಜ್ಜೀವಃ ಸಂಸಾರಲಕ್ಷಣಃ ೩

ಪ್ರಸಾದ ಈಶ್ವರಃ ಸಾಕ್ಷಾತ್ ಸಚ್ಚಿದಾನಂದಲಕ್ಷಣಃ
ಸ್ವರೂಪಮೇವಮುಕ್ತ್ವಾಥ ವಿಶೇಷಃ ಪುನರುಚ್ಯತೇ ೪

ಸ ಪಶ್ಯತಿ ಶರೀರಂ ತಚ್ಛರೀರಂ ತಂ ನ ಪಶ್ಯತಿ
ತೌ ಪಶ್ಯತಿ ಪರಃ ಕಶ್ಚಿತ್ತಾವುಭೌ ತಂ ನ ಪಶ್ಯತಃ ೫

---

ಸೂ. ೩. ಶರೀರಾದಿ ಜಗತ್ತು ಭ್ರಾಂತಿಲಕ್ಷಣದಿಂದ ಕೂಡಿದಾಗ ಉಚ್ಛಿಷ್ಟವೆನಿಸುವುದು. ಜೀವನು ಶರೀರಾದಿ ಜಗತ್ತನ್ನು ನನ್ನದೆಂದು ಅಭಿಮಾನಿಸಿದಾಗ ಸಂಸಾರಲಕ್ಷಣದಿಂದ ಕೂಡಿ, ಅನ್ನಪದವಾಚ್ಯನಾಗುವನು.

ಸೂ. ೪. ಸಚ್ಚಿದಾನಂದಲಕ್ಷಣದಿಂದ ಕೂಡಿದ ಸಾಕ್ಷಾದೀಶ್ವರನು ಪ್ರಸಾದಪದವಾಚ್ಯನಾಗುವನು. ಹೀಗೆ ಜಗತ್ತು - ಜೀವ - ಈಶ್ವರರ ಸಾಮಾನ್ಯಸ್ವರೂಪವನ್ನು ಹೇಳಿ, ಮುಂದೆ ತದ್ವಿಶೇಷಸ್ವರೂಪವನ್ನು ಹೇಳುವೆನು.

ಸೂ. ೫. ಜೀವನು ಶರೀರವನ್ನು ತಿಳಿಯುವನು. ಶರೀರವು ಜೀವನನ್ನು ತಿಳಿಯುವುದಿಲ್ಲ. ಜೀವ ಶರೀರಗಳನ್ನು ಈಶ್ವರನು ತಿಳಿಯುವನು. ಆ ಜೀವ, ಶರೀರಗಳು ಈಶ್ವರನನ್ನು ತಿಳಿಯಲಾರವು - ಎಂದರೆ ಶರೀರದ ಅಂತರದಲ್ಲಿ ಜೀವನಿರುವನು. ಜೀವನು ಶರೀರವನ್ನು ತಿಳಿಯಬಲ್ಲನು. ಹೊರಗಿನ ಜಡವಾದ ಶರೀರವು ಅಂತರ್ಗತ ಜೀವನನ್ನು ತಿಳಿಯಲಾರದು. ಶರೀರ ಶರೀರಿಗಳ ಅಂತರ್ಗತನಾದ ಈಶ್ವರನಿಗೆ ಶರೀರಶರೀರಿಗಳು ಗೋಚರವಾಗುವವು. ಈಶ್ವರನಿಗಿಂತಲೂ ಹೊರಗಿರುವ ಶರೀರಶರೀರಿಗಳಿಗೆ ಈಶ್ವರನು ಗೋಚರಿಸುವದಿಲ್ಲವೆಂದು ಭಾವವು.

ಇತ್ಯೇವಮಧಿಕೃತ್ಯಾರ್ಥಂ ಸ ಬಾಹ್ಯಾಭ್ಯಂತರಂ ಪರಂ
ಜ್ಞಾನಕ್ರಿಯೋಭಯೋರೈಕ್ಯಂ ವರ್ತತೇ ಭಕ್ತಿರೈಶ್ವರೀ ೬

ಶಿಷ್ಯಃ

ಅವಾಚ್ಯಾತ್ಮಸ್ವರೂಪಾಯ ಶಿವಭಾವಪ್ರದಾಯಿನೇ
ನಮಃ ಸದ್ಗುರುನಾಥಾಯ ಷಟ್‌ಸ್ಥಲಬ್ರಹ್ಮಮೂರ್ತಯೇ ೭

ವೃತ್ತಂ ॥ ಗುರುಂ ಮಹಾಕಾರುಣಿಕಂ ಪ್ರಸನ್ನಂ ಸ್ವಷಟ್‌ಸ್ಥಲ
ಬ್ರಹ್ಮಪದೇಷು ಸಂಸ್ಥಂ
ಪ್ರಣಮ್ಯ ಭಕ್ತ್ಯಾ ಪರಯಾಥ ಶಿಷ್ಯಃ ಕೃತಾಂಜಲಿಃ
ಸಂಯತವಾಗಪೃಚ್ಛತ್ ೮

---

ಸೂ. ೬. ಹೀಗೆ ಮೇಲೆ ವಿವರಿಸಿದ ಜಗತ್ತು - ಜೀವ - ಈಶ್ವರರ ಸಾಮಾನ್ಯವಿಶೇಷಸ್ವರೂಪಗಳ ಅರ್ಥವನ್ನಾಶ್ರಯಿಸಿ, ಪ್ರಾಪ್ತವಾಗುವ ಬಾಹ್ಯಾಭ್ಯಂತರ ಜ್ಞಾನಕ್ರಿಯೆಗಳ ಏಕತ್ವದಲ್ಲಿ ಈಶ್ವರಭಕ್ತಿಯು ವರ್ತಿಸುವುದು. ಎಂದರೆ - ಜ್ಞಾನಕ್ರಿಯೆಗಳ ಸಾಮರಸ್ಯದಲ್ಲಿಯೇ ಶಿವಭಕ್ತಿ ರೂಪುಗೊಳ್ಳುವುದೆಂದು ಭಾವವು.

ವಿಚಾರ

ಜಗತ್ತು ಉಚ್ಛಿಷ್ಟ ( ತ್ಯಾಜ್ಯ ) ವೆಂಬ ಭಾವನೆಯು ಭ್ರಾಂತಿಜನ್ಯವಾದುದು. ಉಚ್ಛಿಷ್ಟಭಾವದ ಅನುಪಪತ್ತಿಯೇ ಪ್ರಸಾದವೆನಿಸುವುದು. ಜೀವಾತ್ಮನಿಗೆ ಶರೀರಾದಿಗಳು ನನ್ನವೆಂಬ ಅಭಿಮಾನವೇ ಸಂಸಾರಕ್ಕೆ ಕಾರಣವು. ಅವನು ಮಮಕಾರರಹಿತನಾದರೆ ಅವನ ಅನ್ನವೆಂದು ಕರೆಯಿಸಿಕೊಂಡ ಸ್ವಸ್ವರೂಪವೂ ಈಶ್ವರಾರ್ಪಿತವಾಗಿ ಪ್ರಸಾದವಾಗುವುದು. ಈ ಪ್ರಸಾದ-ಭಾವನೆಯನ್ನುಂಟುಮಾಡುವ ಶಕ್ತಿಯು ಜ್ಞಾನಕ್ರಿಯೆಗಳನ್ನೊಂದುಗೂಡಿಸುವ ವೀರಶೈವಭಕ್ತಿಯಲ್ಲಿರುವುದು.

ಶಿಷ್ಯ. ಸೂ. ೭, ೮, ೯. ವಚಿಸಲಿಕ್ಕಾಗದ ಆತ್ಮಸ್ವರೂಪವುಳ್ಳವನೂ, ಶಿವಭಾವವನ್ನುಂಟುಮಾಡುವವನೂ, ಷಟ್‌ಸ್ಥಲಬ್ರಹ್ಮಮೂರ್ತಿಯೂ

ಗುರೋಃ ಶಿವಜ್ಞಾನನಿಧೇ ಶಿವಾತ್ಮನ್ ತ್ವಯೇರಿತೇ ಷಟ್‌ಸ್ಥಲ-
ನಿರ್ಣಯೋ ತೇ
ಕೃಪಾಬಲಾತ್ಸರ್ವಮವೇದಿ ಕಿಂಚಿದ್ವಿತರ್ಕ್ಯತೇ ತತ್ರ ಮಯಾ
ಪ್ರಸಾದಃ

ಭಾಂಡಸ್ಥಮನ್ನಂ ಪ್ರವದಂತಿ ಯತ್ಪುನಃ ಕೇಚಿತ್ ಪ್ರಸಾದಂ
ವಿನಿವೇದಿತಂ ಶಿವೇ
ಉಚ್ಛಿಷ್ಟಮೇವೇತಿ ತದಾತ್ಮಸೇವಿತಂ ತತ್ಕಿಂ ಯಥಾರ್ಥಂ
ಕಥಯಸ್ವ ಮೇ ಪ್ರಭೋ ೧೦

ಆದಾವೋದನಮೇತತ್ಕಥಂ ಭವೇನ್ಮಧ್ಯತಃ ಪ್ರಸಾದಸ್ತು
ಉಚ್ಛಿಷ್ಟಂ ಕಥಮಂತೇ ವದಸ್ವ ಮಮ ಸದ್ಗುರೋಽಸ್ಯ ಪರಮಾರ್ಥಂ ೧೧

---

ಆದ ಸದ್ಗುರುನಾಥನೆ ನಿನಗೆ ನಮಸ್ಕಾರ (೧). ಷಟ್‌ಸ್ಥಲಬ್ರಹ ರೂಪಿಯೂ, ಮಹಾಕರುಣಾಮಯನೂ, ಪ್ರಸನ್ನನೂ ಆದ ಗುರುವನ್ನು ಶ್ರೇಷ್ಠಭಕ್ತಿಯಿಂದ ನಮಸ್ಕರಿಸಿದ ಶಿಷ್ಯನು ಕೈಮುಗಿದು ನಿಯತವಾಕ್ಕುಳ್ಳವನಾಗಿ ಹೀಗೆ ಪ್ರಶ್ನೆಮಾಡಿದನು. (೨) ಶಿವಸ್ವರೂಪನೂ, ಶಿವಜ್ಞಾನನಿಧಿಯೂ ಆದ ಗುರುವೆ, ನೀನು ಹೇಳಿದ ಷಟ್‌ಸ್ಥಲನಿರ್ಣಯದಲ್ಲಿರುವ ವಿಷಯವು ನಿನ್ನ ಕೃಪಾಬಲದಿಂದ ತಿಳಿದಿರುವುದು. ಆದರೆ, ಪ್ರಸಾದವಿಷಯದಲ್ಲಿ ಮಾತ್ರ ಕಿಂಚಿತ್ತರ್ಕವಿರುವುದು.(೩)

ಸೂ. ೧೦. ಪ್ರಭುವೆ, ಭಾಂಡದಲ್ಲಿರುವಾಗ ಅನ್ನವೆನಿಸುವುದು. ಅದು ಶಿವನಿಗೆ ಅರ್ಪಿಸಿದಾಗ ಪ್ರಸಾದವೆನಿಸುವುದು. ಅದನ್ನು ಜೀವಾತ್ಮರು ಭುಂಜಿಸಿ ಬಿಟ್ಟಾಗ ಅದು ಪುನಃ ಉಚ್ಛಿಷ್ಟವೆನಿಸುವುದೆಂದು ಕೆಲವರು ಹೇಳುವರು. ಇದರ ಯಥಾರ್ಥಸ್ವರೂಪವನ್ನು ನನಗೆ ಹೇಳು.

ಸೂ. ೧೧. ಸದ್ಗುರುವೆ, ಮೊದಲಲ್ಲಿ ಅನ್ನವಾಗಿ, ಮಧ್ಯದಲ್ಲಿ ಪ್ರಸಾದವಾಗಿ, ಕೊನೆಯಲ್ಲಿ ಉಚ್ಛಿಷ್ಟವಾಗುವುದೆಂತು ? ಇದರ ನಿಜಾರ್ಥವನ್ನು ಹೇಳು.

ಏಕಮೇವಂ ಕಥಂ ವಸ್ತು ಭಿದ್ಯತೇ ತತ್ತ್ರಿಧಾ ಪ್ರಭೋ
ತೇಷು ತ್ರಿಷು ಕಿಮಾದೇಯಂ ಕಿಂ ತತ್ರ ವದ ಕಾರಣಂ ೧೨

ಇತಿ ಪರಿಪೃಷ್ಟಸ್ತೂಷ್ಣೀಂ ನಿರತಿಶಯಾನಂದವೈಭವೋsತಿಷ್ಠತ್
ಚಿರಮವಲೋಕ್ಯಾತ್ಮಾನಂ ಸ್ವಯಂಪ್ರಭಂ ಶಿಷ್ಯಮಾಹ ಗುರುನಾಥಃ ೧೩

ಗುರು :

ಪೃಷ್ಟಂ ತ್ವಯಾ ವತ್ಸ ಕಿಮೇತದದ್ಭುತಂ ಪೃಷ್ಟಂ ನ ಕೇನಾಪಿ
ಪುರಾ ಪರಾತ್ಪರಂ
ವಕ್ಷ್ಯೇ ಪ್ರಸಾದಸ್ಯ ಪದಾರ್ಥತಾಂ ಕ್ಷಣಂ ನೋಚ್ಛಿಷ್ಟತಾಮಸ್ಯ
ಸಮಾಹಿತಃ ಶೃಣು ೧೪

---

ಸೂ.೧೨. ಪ್ರಭುವೆ, ಒಂದೇ ವಸ್ತುವೆ ಹೀಗೆ ಮೂರು ಬಗೆಯಾಗಿ ಭಿನ್ನವಾಗುವುದು ಹೇಗೆ ? ಆ ಮೂರು ವಿಧಗಳಲ್ಲಿ ಸ್ವೀಕರಿಸತಕ್ಕುದು ಯಾವುದು ? ಅದಕ್ಕೆ ಕಾರಣವೇನು ? ಹೇಳು.

ಸೂ. ೧೩. ಹೀಗೆ ಪ್ರಶ್ನೆ ಮಾಡಲ್ಪಟ್ಟ ಗುರುನಾಥನು ಬಹಳ ಹೊತ್ತು ನಿರತಿಶಯಾನಂದವಿಭವವುಳ್ಳವನಾಗಿ, ಸುಮ್ಮನೆ ಕುಳಿತನು. ಆಮೇಲೆ ಸ್ವಾತ್ಮಪ್ರಭೆಯನ್ನು ನಿರೀಕ್ಷಿಸಿಕೊಂಡು ಶಿಷ್ಯನಿಗೆ ಹೇಳಿದನು.

ಗುರು. ಸೂ. ೧೪. ವತ್ಸ, ನೀನು ಕೇಳಿದ ಪ್ರಶ್ನೆಯು ಆಶ್ಚರ್ಯಕರವಾದುದು. ಪೂರ್ವದಲ್ಲಿ ಯಾವನೂ ಈ ರೀತಿಯಾದ ಶ್ರೇಷ್ಠ ಪ್ರಶ್ನೆಯನ್ನು ಕೇಳಿದುದಿಲ್ಲ. ಸಾವಧಾನದಿಂದ ಕೇಳು. ಪ್ರಸಾದವು ಕ್ಷಣಕಾಲ ಪದಾರ್ಥವೆನಿಸುವುದಾಗಲಿ ಉಚ್ಛಿಷ್ಟವೆನಿಸುವುದಿಲ್ಲವೆಂಬುದನ್ನು ಹೇಳುವೆನು.

ಪ್ರಸಾದ ಆದ್ಯಾಂತವಿವರ್ಜಿತಃ ಸ್ವಯಂ ಹ್ಯಖಂಡರೂಪಃ
ಪರಿಶೇಷಲಕ್ಷಣಃ
ವಿಕಲ್ಪಹೀನಃ ಸುವಿಶುದ್ಧವಸ್ತ್ವಿತಿ ಪ್ರಭಾವ ಏಷೋಽಸ್ಯ
ನಿಜಸ್ವಭಾವಜಃ ೧೫

ಶಿಷ್ಯಃ

ವೃತ್ತಂ ॥ ಪ್ರಭೋ ಕಿಮುಕ್ತಂ ಭವತಾ ಪುರಾ ಮೇ ನಿರೂಪಿತಂ
ಲಿಂಗಮನಾದ್ಯನಂತಂ
ವಿಕಲ್ಪಹೀನಂ ಪರಿಶೇಷಿತಂ ಚೇತ್ಯಖಂಡರೂಪಂ
ಸುವಿಶುದ್ಧಮೇತತ್ ೧೬

---

ಸೂ. ೧೫. ಪ್ರಸಾದವು ಆದ್ಯಂತರಹಿತವೂ, ಅಖಂಡವೂ, ಪರಿಶೇಷ ಲಕ್ಷಣಲಕ್ಷಿತವೂ, ನಿರ್ವಿಕಲ್ಪವೂ, ಅತಿಶಯಶುದ್ಧವೂ ಆಗಿರುವುದು. ಈ ರೀತಿಯಾದ ಪ್ರಸಾದಪ್ರಭಾವವು ಸ್ವಾಭಾವಿಕವಿರುವುದು.

ವಿಚಾರ

ಶಿಷ್ಯನ ಪ್ರಶ್ನೆಯು ಭೇದವಾದದ ಶೈವದೃಷ್ಟಿಯಿಂದ ಕೇಳಲ್ಪಟ್ಟುದಾಗಿರುವುದು. ಗುರುವಿನ ಉತ್ತರವು ಪ್ರಸಾದವಿಷಯಕವಾದ ವೀರಶೈವದೃಷ್ಟಿಯಿಂದ ಉಕ್ತವಾಗಿರುವುದು. ಆದರೆ ವೀರಶೈವರಲ್ಲಿಯೂ ಕೆಲವರಿಗೆ ಪ್ರಸಾದವಿಷಯದಲ್ಲಿ ಬರುವ ಸಂಶಯಗಳು ಈ ಗುರುಶಿಷ್ಯಸಂವಾದದಲ್ಲಿ ಪರಿಹಾರವಾಗುವವು. ಆ ಪರಿಹಾರಕ್ರಮವು ಮುಂದೆ ಗೊತ್ತಾಗುವುದು.

ಶಿಷ್ಯ. ಸೂ. ೧೬. ಪ್ರಭುವೆ, ನೀನು ಹೇಳಿದುದೇನು ? ಪೂರ್ವದಲ್ಲಿ ನೀನು ಲಿಂಗವೇ ಅನಾದಿಯೂ, ಅನಂತವೂ, ನಿರ್ವಿಕಲ್ಪವೂ, ಪರಿಶೇಷ ರೂಪವೂ, ಅಖಂಡವೂ ಅತಿಶಯಶುದ್ಧವೂ ಆದುದೆಂದು ಹೇಳಿರಲಿಲ್ಲವೇ ? ( ಈಗ ಲಿಂಗದ ಲಕ್ಷಣವನ್ನೇ ಪ್ರಸಾದಕ್ಕೂ ಹೇಳುವುದೇಕೆ ? ಎಂಬುದೇ ಶಿಷ್ಯನ ಪ್ರಶ್ನೆಯಾಗಿರುವುದು. )

ಗುರು ಃ

ಶೃಣುಷ್ವ ಹೇ ವತ್ಸ ಕೃತಾರ್ಥಬುದ್ಧೇ ವಿಭಾತಿ ಸಾಕ್ಷೇಪವಚಃ ಸದರ್ಥಂ
ವದಾಮಿ ತೇ ಸಂಗ್ರಹಣೇನ ಲಿಂಗಪ್ರಸಾದಯೋರ್ನೈವ ವಿಭಿನ್ನಭಾವಃ ೧೭

ಲೀಯತೇ ದ್ರವ್ಯಮನ್ನಾದಿ ಯತ್ರ ಯದ್ಗಮ್ಯತೇ ಯತಃ
ಪ್ರಸಾದತ್ವೇನ ತಲ್ಲಿಂಗಂ ಪ್ರಸಾದಸ್ತ್ವತ ಏವ ಸಃ ೧೮

ಅರ್ಚನದ್ವಾರತೋ ಲಿಂಗಮರ್ಪಣದ್ವಾರತಃ ಸ್ವಯಂ
ಪ್ರಸಾದ ಇತಿ ಭಕ್ತ್ಯಾಯಮೇಕ ಏವೋಪಚರ್ಯತೇ ೧೯

---

ಗುರು. ಸೂ. ೧೭. ಕೃತಾರ್ಥಬುದ್ಧಿಯ ವತ್ಸನೆ, ಕೇಳು. ನೀನು ಆಕ್ಷೇಪಿಸುವ ಪ್ರಶ್ನೆಯ ಅರ್ಥವು ಸರಿಯಾಗಿಯೇ ಇರುವುದು. ಆದರೆ, ನಿನಗೆ ಸಂಕ್ಷಿಪ್ತವಾಗಿ ಹೇಳುವೆನು. ಲಿಂಗ- ಪ್ರಸಾದಗಳೆರಡರಲ್ಲಿ ಭೇದವೇ ಇಲ್ಲ.

ಸೂ. ೧೮. ಯಾವ ತತ್ತ್ವದಲ್ಲಿ ಅನ್ನಾದಿಯಾದ ದ್ರವ್ಯವು ಲೀನವಾಗಿ, ಪುನಃ ಯಾವ ತತ್ತ್ವದಿಂದ ಆ ಅನ್ನಾದಿದ್ರವ್ಯವೇ ಪ್ರಸಾದರೂಪದಿಂದ ಗಮ್ಯವಾಗುವುದೋ ಅದೇ ಲಿಂಗವು. ಈ ಕಾರಣದಿಂದಲೇ ಲಿಂಗವು ಪ್ರಸಾದವೂ ಎನಿಸುವುದು.

ಸೂ. ೧೯. ಅರ್ಚನಸಮಯದಲ್ಲಿ ಲಿಂಗರೂಪವಾಗಿಯೂ, ಅರ್ಪಣ ಸಮಯದಲ್ಲಿ ಪ್ರಸಾದರೂಪವಾಗಿಯೂ ಏಕ ವಸ್ತುವೇ ( ಇಷ್ಟಲಿಂಗವೇ ) ಭಕ್ತಿಯಿಂದ ಉಪಚರಿಸಲ್ಪಡುವುದು. ಎಂದರೆ - ಲಿಂಗಲಕ್ಷಣಗಳೆಲ್ಲವೂ ಪ್ರಸಾದಕ್ಕೂ ಅನ್ವಯಿಸುವವೆಂದು ತಾತ್ಪರ್ಯ.

ಶಿಷ್ಯಃ

ಜ್ಞಾತಃ ಪ್ರಸಾದಸದ್ಭಾವ ಉಕ್ತಲಕ್ಷಣತೋ ಮಯಾ
ಪದಾರ್ಥರೂಪಮಿತಿ ಕಿಂ ಕೃಪಯಾ ವದ ಸದ್ಗುರೋ ೨೦

ಗುರು :

ವೃತ್ತಂ ॥ ಭಾವಃ ಪ್ರಸಾದಂ ಕುರುತೇ ಪದಾರ್ಥಂ ಭೂಯಃ
ಪ್ರಸಾದಂ ವಿನಿಯೋಗಕಾಲೇ
ಆದ್ಯಂತಯೋರಪ್ರಮಿತಂ ಪ್ರಸಾದಂ ಮಧ್ಯೇ ಪದಾರ್ಥಂ
ಕ್ಷಣಮಾತನೋತಿ ೨೧

ಶಿಷ್ಯಃ

ಪದಾರ್ಥರೂಪಂ ಕಿಮಿತೀಹ ಪೃಷ್ಟೇ ತ್ವಯಾ ಕಿಮೇತತ್ಕಥಿತಂ
ಪ್ರಭೋ ಮೇ
ಪ್ರಸಾದ ಏವ ಕ್ರಿಯತೇ ಪದಾರ್ಥಮಿತಿ ಪ್ರಸಾದಸ್ಯ ವಿಪತ್ತಿರುಕ್ತಾ ೨೨

---

ಶಿಷ್ಯ. ಸೂ. ೨೦. ಸದ್ಗುರುವೆ, ನೀನು ಹೇಳಿದ ಲಕ್ಷಣದಿಂದ ಪ್ರಸಾದ ಸದ್ಭಾವವನ್ನು ತಿಳಿದೆನು. ಇನ್ನು ಪದಾರ್ಥಸ್ವರೂಪವೇನು ? ಕೃಪೆಯಿಂದ ಹೇಳು.

ಗುರು. ಸೂ. ೨೧. ಭಕ್ತಿಭಾವವು ಲಿಂಗನೈವೇದ್ಯಕಾಲದಲ್ಲಿ ಪ್ರಸಾದ ವನ್ನು ಪದಾರ್ಥವನ್ನಾಗಿ ಮಾಡಿ ಪುನಃ ಪ್ರಸಾದವನ್ನು ಮಾಡುವುದು. ಎಂದರೆ ಲಿಂಗೋಪಾಸನೆಯ ಆದ್ಯಂತ ಕಾಲಗಳಲ್ಲಿ ಪ್ರಸಾದರೂಪದಿಂದಿರುವ ವಸ್ತುವು ಮಧ್ಯದ ಅರ್ಪಣದ ಕ್ಷಣಕಾಲದಲ್ಲಿ ಮಾತ್ರ ಪದಾರ್ಥವಾಗಿರು ವುದು.

ಶಿಷ್ಯ. ಸೂ. ೨೨. ಪ್ರಭುವೇ, ಪದಾರ್ಥಸ್ವರೂಪವೇನೆಂದು ಕೇಳಿದರೆ ಅದಕ್ಕೆ ಉತ್ತರವಾಗಿ ನೀವು ಹೇಳಿದುದೇನು ? ಭಕ್ತಿಭಾವವು ಪ್ರಸಾದವನ್ನು

ಗುರುಃ

ಶ್ರೂಯತಾಂ ಸುಮತೇ ವತ್ಸ ಪರಮಾರ್ಥಂ ಬ್ರವೀಮಿ ತೇ
ಅವಿಪತ್ತಿಂ ಪ್ರಸಾದಸ್ಯ ವಿಪತ್ತಿಂ ಕಲ್ಪಿತಸ್ಯ ಚ ೨೩

ವೃತ್ತಂ ॥ ಯಥಾ ಸುವರ್ಣಂ ರುಚಕಾಯ ಕಲ್ಪಿತಂ ವಿಲುಪ್ಯತೇ ನೈವ ಸುವರ್ಣಭಾವತಃ
ತಥಾ ಪದಾರ್ಥಾಯ ಹಿ ಕಲ್ಪಿತೋಽಪ್ಯಸೌ ಪ್ರಸಾದ ಇತ್ಯಾತ್ಮಧಿಯಾಽವಧಾರಯ ೨೪

ರೋಚತೇ ರುಚಕತ್ವೇನ ರುಚಯೇ ರುಕ್ಮರೂಪಕಂ
ಯಥಾ ತಥಾ ಪ್ರಸಾದೋಽಯಂ ಪದಾರ್ಥತ್ವೇನ ರೂಪಿತಃ ೨೫

---

ಪದಾರ್ಥವನ್ನಾಗಿ ಮಾಡುವುದೆಂದು ಹೇಳಿದರೆ, ಪ್ರಸಾದಸ್ವರೂಪಕೆ ವಿಪತ್ತಿಯು (ಹಾನಿಯು) ಉಕ್ತವಾದಂತಾಗಲಿಲ್ಲವೆ ?

ಗುರು. ಸೂ. ೩. ಸುಮತಿಯುಳ್ಳ ವತ್ಸನೆ, ನಿನಗೆ ಯಥಾರ್ಥವನು ಹೇಳುವೆನು ಕೇಳು. ಪ್ರಸಾದಭಾವಕ್ಕೆ ವಿಪತ್ತಿಯು (ಲೋಪ) ಇಲ್ಲ. ಪದಾರ್ಥಭಾವಕ್ಕೆ ವಿಪತ್ತಿಯಿರುವುದು.

ಸೂ. ೨೪. ಸುವರ್ಣವನ್ನು ಆಭರಣವನ್ನಾಗಿ ಮಾಡಿದರೂ ಆ ಸುವರ್ಣತ್ವಕ್ಕೆ ಹೇಗೆ ಲೋಪವುಂಟಾಗುವುದಿಲ್ಲವೋ; ಹಾಗೆ ಪ್ರಸಾದವನ್ನು (ಅರ್ಪಣಸಮಯದಲ್ಲಿ) ಪದಾರ್ಥವನ್ನಾಗಿ ಮಾಡಿದರೂ, ಆ ಪ್ರಸಾದ ಭಾವಕ್ಕೆ ಲೋಪವಿಲ್ಲೆಂದು ನಿನ್ನ ಬುದ್ಧಿಯಿಂದ ನಿರ್ಣಯಿಸು.

ಸೂ. ೨೫. ಸುವರ್ಣವು ಆಭರಣರೂಪದಿಂದ ಅದನ್ನು ಧರಿಸಿಕೊಳ್ಳುವವರಿಷ್ಟದಂತೆ ಪ್ರಿಯವಾಗಿರುವುದು. ಅದರಂತೆ ಪ್ರಸಾದವಾದರೂ ಅರ್ಪಣಮಾಡುವವರಿಷ್ಟದಂತೆ ಪದಾರ್ಥರೂಪದಿಂದ ಪ್ರಿಯವೆನಿಸುವುದು.

ಪ್ರಸಾದಸತ್ತಾಪ್ರತಿಬೋಧನಾರ್ಥಂ ಕ್ರಿಯಾಕಲಾಪೈ-
ರ್ವಿವಿಧೋಪಚಾರೈಃ
ಸಮರ್ಪಕೋ ಭಾವ ಇತಿ ಪ್ರಸಾದಂ ಪದಾರ್ಥಮಪ್ಯಾ-
ತನುತೇ ಸಲೀಲಂ ೨೬

ಶಿಷ್ಯಃ

ವೃತ್ತಂ ॥ ಜ್ಞಾತಂ ಪದಾರ್ಥಸ್ಯ ಚ ಕಲ್ಪಿತತ್ವಂ ವಿಪತ್ತಿರಸ್ಯಾಪಿ
ಚ ಕಲ್ಪಿತತ್ವಾತ್
ಕೋ ಭಾವ ಉಕ್ತೋ ವಿನಿಯೋಗ ಏಷ ಕ ಇತ್ಯತೋ ಮೇ
ಕೃಪಯಾ ವದಸ್ವ ೨೭

---

ಸೂ. ೨೬. ಪ್ರಸಾದಸದ್ಭಾವಜ್ಞಾನಸಿದ್ಧಿಗಾಗಿ ಉಪಾಸಕನ ಸಮರ್ಪಕ ಭಾವವು ವಿವಿಧೋಪಚಾರಗಳಿಂದ ಕೂಡಿದ ಅರ್ಚನ ಕ್ರಿಯಾಕಲಾಪ ಗಳಿಂದ ಕೂಡಿದ ಲೀಲಾಜಾಲವಾಗಿ ಪ್ರಸಾದವನ್ನು ಪದಾರ್ಥವನ್ನಾಗಿ ಮಾಡಿಕೊಳ್ಳುವುದು ( ಆ ಪದಾರ್ಥವನ್ನೇ ಶಿವಾರ್ಪಣಯೋಗ್ಯವೆಂದು ಭಾವಿಸಲಾಗುವುದು. )

ವಿಚಾರ

ವೀರಶೈವನು ಭೋಗಸಾಧನ ವಸ್ತುಗಳನ್ನು ಶಿವಾನುಗ್ರಹದಿಂದ ಪ್ರಾಪ್ತ ವಾದ ಪ್ರಸಾದವೆಂದೇ ಭಾವಿಸಿರುವನು. ಇಷ್ಟೇ ಅಲ್ಲ; ಅವನು ಭೋಗ ವನ್ನೂ, ಭೋಗಾಯತನವಾದ ದೇಹವನ್ನೂ, ಭೋಕ್ತೃವಾದ ತನ್ನನ್ನೂ ಶಿವಪ್ರಸಾದವೆಂದೇ ತಿಳಿದುಕೊಂಡಿರುವನು; ಪೂಜಾಕಾಲದಲ್ಲಿ ಮಾತ್ರ ಪ್ರಸಾದರೂಪವಾಗಿರುವ ಎಲ್ಲವುಗಳನ್ನು ಶಿವಾರ್ಪಣಯೋಗ್ಯವಾದ ಪದಾರ್ಥಗಳನ್ನಾಗಿ ಭಾವಿಸುವನು. ಈ ವಿಷಯವನ್ನು ಸೂತ್ರಕಾರನು ಶಿವಾನುಭವಸೂತ್ರದ ೧೭-೧೮ನೆಯ ಸೂತ್ರಗಳಲ್ಲಿ ಸ್ಫುಟವಾಗಿ ನಿರೂಪಿ- ಸಿರುವನು.

ಶಿಷ್ಯ. ಸೂ. ೨೭. ಸ್ವಾಮಿ, ಕಲ್ಪಿತವಾದ ಪದಾರ್ಥವಾಸನೆಯ ವಿಪತ್ತಿ ಯನ್ನು ತಿಳಿದೆನು. ಇನ್ನು ತಾವು ಹೇಳಿದ ಸದ್ಭಾವ ಮತ್ತು ವಿನಿಯೋಗ ಇವುಗಳನ್ನು ಕೃಪೆಯಿಂದ ವಿವರಿಸಬೇಕು.

ಗುರು :

ಸಮ್ಯಕ್‌ಪೃಷ್ಟಃ ಪ್ರಸಾದಸ್ಯ ಸದ್ಭಾವೋಽಯಂ ಮಹಾತ್ಮನಾ
ಪ್ರವಕ್ಷ್ಯಾಮಿ ಸಮಾಸೇನ ಸಮಾಹಿತಮನಾಃ ಶೃಣು ೨೮

ಭಾವೋ ಭಕ್ತಿರಿಹೈವೋಕ್ತಃ ಶಿವೈಕವಿಷಯಃ ಸ್ವಯಂ
ವಿನಿಯೋಗಃ ಕ್ರಿಯಾರೂಪಃ ಶಿವಪೂಜಾದಿಲಕ್ಷಣಃ ೨೯

ಶಿಷ್ಯ :

ಇದಂ ಕಿಮಾಚಾರ್ಯವರ ತ್ವಯೋಕ್ತಂ ಸ್ವಭಾವಮೇನಂ ವಿನಿಯೋಗಮತ್ರ
ಅಪೃಚ್ಛಮೇವಾಹಮಿಮಾಂ ಚ ಭಕ್ತಿಂ ಕ್ರಿಯಾಂ ಭವಾನಾತ್ಥ ನಿರೂಪ್ಯತಾಂ ಮೇ ೩೦

ಗುರು :

ವರಂ ಮಹಾಭಾಗ್ಯವತೋ ವಿವೇಕಸ್ತವೋತ್ತರಾರ್ಥಸ್ಯ ಚ ಸೂಚಕೋ ಹಿ
ಕ್ರಿಯಾತ್ಮಿಕಾ ಭಕ್ತಿರಿಹೈವ ಭಾವಃ ಸ ಏವ ಭಕ್ತಿರ್ವಿನಿಯೋಗ-ಯುಕ್ತಃ ೩೧

---

ಗುರು. ಸೂ. ೨೮, ೨೯. ಶ್ರೇಷ್ಠಾತ್ಮನೇ, ಪ್ರಸಾದಸದ್ಭಾವವು ನಿನ್ನಿಂದ ಚೆನ್ನಾಗಿ ಪ್ರಶ್ನೆಮಾಡಲ್ಪಟ್ಟುದು. ಅದನ್ನು ಸಂಕ್ಷಿಪ್ತವಾಗಿ ಹೇಳುವೆನು, ಶಾಂತಚಿತ್ತನಾಗಿ ಕೇಳು. (೨೮) ಇಲ್ಲಿ ಸದ್ಭಾವವೆಂದರೆ ಭಕ್ತಿಯೇ. ಅದು ಶಿವನೊಬ್ಬನನ್ನೇ ವಿಷಯೀಕರಿಸುವ ಭಾವವಾಗಿರುವುದು. ಇನ್ನು ಶಿವಪೂಜಾದಿಲಕ್ಷಣದಿಂದ ಕೂಡಿದ ಕ್ರಿಯೆಯೇ ವಿನಿಯೋಗವೆನಿಸುವುದು. (೨೯)

ಶಿಷ್ಯ. ಸೂ. ೩೦. ಆಚಾರ್ಯಶ್ರೇಷ್ಠನೇ, ನೀನು ಹೇಳಿದುದೇನು? ನಾನು ಪ್ರಸಾದಸದ್ಭಾವ ಮತ್ತು ವಿನಿಯೋಗವನ್ನು ಕೇಳಿದರೆ, ನೀನು ಭಕ್ತಿಕ್ರಿಯೆಗಳನ್ನು ಹೇಳಿದೆ. ಅವುಗಳನ್ನೇ ನಿರೂಪಿಸು.

ಗುರು. ಸೂ. ೩೧. ಮಹಾಭಾಗ್ಯಶಾಲಿಯೆ, ನಿನ್ನ ವಿವೇಕವು ಶ್ರೇಷ್ಠ

ಶಿಷ್ಯ :

ಮಯಾ ಕ್ರಿಯಾತ್ಮಿಕಾಭಕ್ತಿರ್ವಿಜ್ಞಾತಾ ತ್ವತ್ಪ್ರಸಾದತಃ
ಕ್ರಿಯಾ ಕಿಮಾತ್ಮಿಕಾ ಸ್ವಾಮಿನ್ ವದ ತತ್ವವಿದಾಂ ವರ ೩೨

ಗುರು :

ಸಬಾಹ್ಯಾಭ್ಯಂತರಾ ಯಾ ಸಾ ಮನೋವಾಕ್ಕಾಯಜಾ ಕ್ರಿಯಾ
ಆದಾನಾರ್ಪಣಸಂಪೂಜಾಜಪಧ್ಯಾನಾತ್ಮಿಕಾ ಮತಾ ೩೩

ಶಿಷ್ಯ :

ಕ್ರಿಯಾ ಕಿಮಾತ್ಮಿಕೇತ್ಯತ್ರ ಮಯಾ ಪೃಷ್ಟೇ ಗುರೂತ್ತಮ
ಭವಾನ್ ಕಿಮುಕ್ತವಾನಾದಾನಾರ್ಪಣಾದಿ ತದುಚ್ಯತಾಂ ೩೪

---

ವಿರುವುದು ಮತ್ತು ನಾನು ಹೇಳುವ ಉತ್ತರಾರ್ಥದ ಸೂಚಕವಾಗಿರುವುದು. ಇಲ್ಲಿ ಕ್ರಿಯಾಮಯವಾದ ಭಕ್ತಿಯೇ ಭಾವವೆನಿಸುವುದು. ಎಂದರೆ, ವಿನಿಯೋಗಯುಕ್ತವಾದ ಆ ಭಾವವೇ ಭಕ್ತಿಯಾಗಿರುವುದು.

ಶಿಷ್ಯ. ಸೂ. ೩೨. ತತ್ತ್ವಜ್ಞಶ್ರೇಷ್ಠನೇ, ನಿನ್ನನುಗ್ರಹದಿಂದ ಕ್ರಿಯಾತ್ಮಕವಾದ ಭಕ್ತಿಯನ್ನು ತಿಳಿದುಕೊಂಡೆನು. ಆ ಭಕ್ತಿಕ್ರಿಯೆಯ ಸ್ವರೂಪವನ್ನು ಹೇಳು ಸ್ವಾಮಿ.

ಗುರು. ಸೂ. ೩೩. ಆ ಭಕ್ತಿಕ್ರಿಯೆಯು ಮನೋವಾಕ್ಕಾಯವೆಂಬ ತ್ರಿಕರಣಗಳಿಂದ ಹುಟ್ಟುವುದರಿಂದ, ಬಾಹ್ಯಾಭ್ಯಂತರವರ್ತಿಯಾಗಿ(ಹೊರಗೂ ಒಳಗೂ ಇರುವುದಾಗಿ), ಆದಾನ, ಅರ್ಪಣ, ಪೂಜೆ, ಜಪ, ಧ್ಯಾನವೆಂದು ಐದು ಪ್ರಕಾರವಾಗಿರುವುದು.

ಶಿಷ್ಯ. ಸೂ ೩೪. ಗುರೂತ್ತಮನೆ, ನಾನು ಕೇಳಿದ ಭಕ್ತಿಕ್ರಿಯೆಯ ಸ್ವರೂಪದ ಪ್ರಶ್ನೆಗೆ ನೀನು ಉತ್ತರವಾಗಿ ಹೇಳಿದ ಆದಾನಾದಿಗಳ ಸ್ವರೂಪವೇನು ಹೇಳು.

ಗುರು :

ಶಿವಪ್ರಸಾದಗ್ರಹಣಮಾದಾನಂ ಚೇತಿ ಗೀಯತೇ
ನಿವೇದನಂ ಪದಾರ್ಥಸ್ಯ ಶಿವಾಯೈತತ್‌ಸಮರ್ಪಣಂ ೩೫

ಶಿವಾರ್ಚನಂ ಭವೇತ್ಪೂಜಾ ಶಿವಮಂತ್ರಸ್ಮೃತಿರ್ಜಪಃ
ಶಿವಸ್ವರೂಪಚಿಂತೈವ ಧ್ಯಾನಮಿತ್ಯಭಿಧೀಯತೇ ೩೬

---

ಗುರು. ಸೂ. ೩೫, ೩೬. ಶಿವಪ್ರಸಾದಗ್ರಹಣವೇ ಆದಾನವು. ಶಿವನಿಗೆ ಪದಾರ್ಥನಿವೇದನವೇ ಸಮರ್ಪಣವು. (೩೪) ಶಿವಾರ್ಚನೆಯೇ ಪೂಜೆ. ಶಿವಮಂತ್ರಸ್ಮರಣವೇ ಜಪವು. ಶಿವರೂಪಚಿಂತನೆಯೇ ಧ್ಯಾನವೆಂದು ಉಕ್ತವಾಗಿದೆ.

ವಿಚಾರ

ವೀರಶೈವನ ಭಕ್ತಿಮಯ ಭಾವನೆಯೇ ಪ್ರಸಾದಸದ್ಭಾವವೆನಿಸುವುದು. ಆ ಭಾವನೆಯು ಶಿವನೊರ್ವನನ್ನೇ ಆಶ್ರಯಿಸಿಕೊಂಡಿರಬೇಕು. ಎಂದರೆ, ಸರ್ವವೂ ಶಿವಾನುಗ್ರಹಪ್ರಾಪ್ತವಾದ ಪ್ರಸಾದವೆಂದು ನಂಬಿರಬೇಕು. ಈ ಬಗೆಯಾದ ಶಿವೈಕವಿಷಯವಾದಭಾವನೆಯೇ ವೀರಶೈವಭಕ್ತಿಯಾಗುವುದು. ಆ ಭಕ್ತಿಯು ಶಿವಪೂಜಾದಿ ಕ್ರಿಯಾರೂಪದಿಂದಿರುವುದು. ಶಿವಪೂಜಾರೂಪವಾದ ಶಿವೋಪಾಸನೆಯಲ್ಲಿ ಅರ್ಚನ-ಅರ್ಪಣವೆಂದೆರಡು ಭಾಗಗಳಿರುವವು. ಅರ್ಚನದಲ್ಲಿ ಪೂಜೆ, ಜಪ, ಧ್ಯಾನವೆಂಬಿವು ಕೂಡಿರುವವು. ಅರ್ಪಣದಲ್ಲಿ ಆದಾನ-ಸಮರ್ಪಣಗಳು ಕೂಡಿರುವವು. ಈ ಐದು ಮನೋವಾಕ್ಕಾಯರೂಪತ್ರಿಕರಣಜನಿತವಾಗಿ, ಬಾಹ್ಯಾಭ್ಯಂತರವರ್ತಿಯಾಗಿರುವವು. (ಉಪಾಸನೆಯಲ್ಲಿ ಅನುಭವವೆಂಬ ಮೂರನೆಯ ಭಾಗವೂ ಸೇರಿರುವುದೆಂಬುದನ್ನು ಮರೆಯಬಾರದು.)

ಶಿಷ್ಯ :

ಕ್ರಿಯಾಸ್ವರೂಪಂ ವಿದಿತಂ ಮಯಾ ತೇ ನಿರೂಪಣವ್ಯಾಜಕೃಪಾ
ಕಟಾಕ್ಷಾತ್
ವಿಭೋ ತ್ವಯೈತತ್ಪರಿಭಾಷಿತಂ ಪ್ರಾಗ್ವದ ಸ್ವರೂಪಂ
ಸ್ಫುಟಮಾದ್ಯಭಕ್ತೇಃ ೩೭

ಗುರು :

ಭಕ್ತಿಸ್ವರೂಪಂ ಶೃಣು ವತ್ಸ ಕಿಂಚಿದ್ವಕ್ತುಂ ಶಿವೇನಾಪಿ ನ ಚ
ಪ್ರಭೂತಂ
ಶಕ್ಯಂ ಕಿಮಾಶ್ಚರ್ಯಮಿತೀಹ ಶಂಭುರ್ಭಕ್ತೇರ್ವಿಧೇಯೋ
ಯಮಶಕ್ತ ಆಸೀತ್ ೩೮

ಭಕ್ತಿಃ ಸ್ವತಂತ್ರಾ ಸ್ವವಶೀಕೃತೇಶ್ವರಾ ಸ್ವಾಭಾವಿಕೀ ಸ್ವಾನುಭವೈಕ
ವೈಭವಾ
ಸ್ವಾಯಂಭುವೀ ಸ್ವಾಗಮಮಾರ್ಗವರ್ತಿನೀ ಸ್ವಚ್ಛಂದವೃತ್ತಿಃ
ಸ್ವರುಚಿರ್ವಿರಾಜತೇ ೩೯

---

ಶಿಷ್ಯ. ಸೂ. ೩೭. ಪ್ರಭುವೆ, ನಿನ್ನ ನಿರೂಪಣವ್ಯಾಜದ ಕೃಪಾಕಟಾಕ್ಷ ದಿಂದ ಭಕ್ತಿಕ್ರಿಯೆಯ ಸ್ವರೂಪವು ವಿದಿತವಾದುದು. ಹಿಂದೆ ನೀನು ವಿವರಿಸಿದ ಭಕ್ತಿಯ ಸ್ಫುಟಸ್ವರೂಪವನ್ನೀಗ ಹೇಳು.

ಗುರು. ಸೂ. ೩೮. ವತ್ಸ, ಭಕ್ತಿಸ್ವರೂಪವನ್ನು ಕಿಂಚಿತ್ತಾಗಿ ಹೇಳು ವೆನು ಕೇಳು. ಆ ಭಕ್ತಿಯ ಸಂಪೂರ್ಣಸ್ವರೂಪವನ್ನು ಶಿವನಿಗೂ ಹೇಳಲು ಶಕ್ಯವಿಲ್ಲ. ಈ ವಿಷಯದಲ್ಲಿ ಆಶ್ಚರ್ಯವೇನಂದರೆ, ಶಿವನೂ ಭಕ್ತಿಗಧೀನ ವಾಗಿ, ಅದನ್ನು ವಿವರಿಸಲು ಅಶಕ್ತನಾಗಿರುವನಲ್ಲವೆ.

## ಭಕ್ತಿಪ್ರಶಂಸಾಷ್ಟಕಂ

ಗುರು. ಸೂ. ೩೯. ಭಕ್ತಿಯು ಸ್ವತಂತ್ರವಾಗಿರುವುದು. ಈಶ್ವರನನ್ನು ಸ್ವಾಧೀನ ಮಾಡಿಕೊಂಡಿರುವುದು. ಭಕ್ತನ ಸ್ವಭಾವಭೂತವಾಗಿರುವುದು. ಮತ್ತು ಸ್ವಾನುಭವೈಕಸಂಪತ್ತುಳ್ಳುದಾಗಿ ನಿತ್ಯವಾಗಿರುವುದು. ಸ್ವಕೀಯ

ಭಕ್ತಿರ್ವಿಶಿಷ್ಟಾ ವಿವಿಧಾ ಕ್ರಿಯಾಪರಾ ವಿದ್ಯಾತ್ಮಿಕಾ
ವಿಶ್ವವಿಮೋಹಹಾರಿಣೀ
ವಿಶ್ವಾಸಿನೀ ವಿಶ್ರುತವೀರಶಾಂಭವೀ ವಿಶ್ರಾಮಭೂಮಿರ್ವಿಮಲಾ
ವಿರಾಜತೇ ೪೦

ಭಕ್ತಿರ್ನಿರೀಹಾ ನಿಯತಿರ್ನಿರುತ್ತರಾ ನಿರ್ಮಾಯಿಕಾ
ನಿಷ್ಕಲನಿಷ್ಕ್ರಿಯಾಶ್ರಯಾ
ನಿಃಸಂಶಯಾ ನಿಶ್ಚಲಿತಾ ನಿರಂಕುಶಾ ನಿಸ್ಸೂತಕಾ
ನಿಶ್ಚಯಧೀರ್ವಿರಾಜತೇ ೪೧

ಭಕ್ತಿರ್ನಿಗೂಢಾ ನಿಜಭಾವರೂಪಿಣೀ ನಿಃಶ್ರೇಯಸಾನಂದ-
ನಿವಾಸದಾಯಿನೀ
ನಿರ್ದೇಹಿನೀ ನಿರ್ವಿಷಯಾ ನಿರಿಂದ್ರಿಯಾ ನಿಃಕೇವಲಾ
ನಿತ್ಯಪದಾ ವಿರಾಜತೇ ೪೨

---

ವಾದ ಶಿವಾಗಮಮಾರ್ಗದಲ್ಲಿ ವರ್ತಿಸುವುದಾಗಿರುವುದು. ಸ್ವೇಚ್ಛಾ ವರ್ತನದಿಂದ ಕೂಡಿ, ಸ್ವಪ್ರಕಾಶದಿಂದ ವಿರಾಜಮಾನವಾಗಿರುವುದು.

ಸೂ. ೪೦. ಭಕ್ತಿಯು ವಿಶೇಷಸ್ವರೂಪವುಳ್ಳುದೂ, ವಿವಿಧಕ್ರಿಯಾರೂಪ ವಾಗಿರುವುದೂ, ವಿದ್ಯಾರೂಪವಾಗಿರುವುದೂ, ವಿಶ್ವಮೋಹವನ್ನು ಪರಿಹರಿಸ ತಕ್ಕುದೂ, ವಿಶ್ವಾಸರೂಪವಾದುದೂ, ವಿಶ್ರುತ ವೀರಶೈವಮಯವಾದುದೂ, ವಿಶ್ರಾಂತಿಸ್ಥಾನವಾದುದೂ, ನಿರ್ಮಲವಾದುದೂ ಆಗಿ ವಿರಾಜಿಸುವುದು.

ಸೂ. ೪೧. ಭಕ್ತಿಯು ನಿಷ್ಕಾಮವೂ, ನಿಯತವೂ, ಶ್ರೇಷ್ಠವೂ, ಮಾಯಾರಹಿತವೂ, ನಿಷ್ಕಲ-ನಿಷ್ಕ್ರಿಯೆಗಳ ಆಶ್ರಯವೂ, ಸಂಶಯ ರಹಿತವೂ, ಚಲನರಹಿತವೂ, ಸ್ವತಂತ್ರವೂ, ಸೂತಕರಹಿತವೂ ಆಗಿ ನಿಶ್ಚಯಜ್ಞಾನದಿಂದ ವಿರಾಜಿಸುವುದು.

ಸೂ. ೪೨. ಭಕ್ತಿಯು ಅತ್ಯಂತ ಗೂಢವೂ, ಸಹಜಜಭಾವಸ್ವರೂಪವೂ, ಮೋಕ್ಷಾನಂದಸ್ಥಾನಪ್ರದವೂ, ಶರೀರರಹಿತವೂ, ವಿಷಯರಹಿತವೂ, ಇಂದ್ರಿಯಾತೀತವೂ, ನಿಃಕೇವಲವೂ, ನಿತ್ಯಸ್ಥಾನವೂ ಆಗಿ, ವಿರಾಜಿಸುವುದು.

ಭಕ್ತಿರ್ದುರಾಚಾರದುರಿಷ್ಟದುರ್ಲಭಾ ದೂರೀಕೃತಾಶೇಷ-
ದುರುಕ್ತಿದೂಷಣಾ
ದುಃಖಾಪಹಾ ದುರ್ಘಟಕಾರಿಣೀ ಶುಭಾ ದುರ್ಜ್ಞೇಯ
ದುಷ್ಪಾರಗುಣಾ ವಿರಾಜತೇ ೩೭

ಭಕ್ತಿಃ ಸದಾಚಾರವತೀ ಸದೋದಿತಾ ಸದ್ವಾಸನಾ
ಸತ್ಯಸುಖಾತ್ಮವಿಗ್ರಹಾ
ಸತ್ತಾಸ್ಫುರಲ್ಲಕ್ಷಣಲಕ್ಷಿತಾ ಸತೀ ಸಚ್ಚಿನ್ಮಯೀ ಸಚ್ಚರಿತಾ ವಿರಾಜತೇ ೩೮

ಭಕ್ತಿಃ ಪ್ರಸನ್ನಾ ಪ್ರತಿಮಾನವರ್ಜಿತಾ ಪ್ರತ್ಯಕ್ಷದೃಕ್-
ಪ್ರತ್ಯಯದರ್ಶನಪ್ರದಾ
ಪ್ರಕ್ಷೀಣದೋಷಾ ಪ್ರಕೃತಿಪ್ರಬೋಧಿತಾ ಪ್ರತ್ಯಕ್‌ಸ್ಥಿತಿಃ
ಪ್ರಾಥಮಿಕಾ ವಿರಾಜತೇ ೩೯

---

ಸೂ. ೩೭. ಭಕ್ತಿಯು ದುರಾಚಾರದುಷ್ಕಾಮಗಳಿಗೆ ದುರ್ಲಭವೂ, ಸರ್ವವಿಧವಾದ ದುರುಕ್ತಿದೂಷಣಗಳಿಗೆ ದೂರವಾದುದೂ, ದುಃಖನಿವಾರಕವೂ, ಅಘಟನಘಟನಕಾರಿಯೂ, ಶುಭಸ್ವರೂಪವೂ, ತಿಳಿಯಲಿಕ್ಕಾಗದ ಅಪಾರಗುಣಗಳುಳ್ಳುದೂ ಆಗಿ ವಿರಾಜಿಸುವುದು.

ಸೂ. ೩೮. ಭಕ್ತಿಯು ಸದಾಚಾರವುಳ್ಳುದೂ, ನಿತ್ಯವಾದುದೂ, ಸದ್ವಾಸನೆ (ಸತ್ಸಂಸ್ಕಾರ) ಯುಳ್ಳುದೂ, ಸತ್ಯಸುಖಾಕಾರವುಳ್ಳುದೂ ಇದ್ದು, ಸದ್ರೂಪಪ್ರಕಾಶಲಕ್ಷಣದಿಂದ ಕೂಡಿದ ಲಿಂಗಪಾತಿವ್ರತ್ಯವುಳ್ಳುದೂ ಆಗಿ, ಸುಜ್ಞಾನಚರಿತ್ರಗಳಿಂದ ವಿರಾಜಿಸುವುದು.

ಸೂ. ೩೯. ಭಕ್ತಿಯು ಪ್ರಸನ್ನವೂ, ಸಮಾಸರಹಿತವೂ, ಪ್ರತ್ಯಕ್ಷದೃಷ್ಟಿಗೋಚರವೂ, ದೋಷರಹಿತವೂ, ಸಹಜಜಾಗೃತಿಯುಳ್ಳುದೂ, ಪ್ರತ್ಯಗಾತ್ಮಸ್ಥಿತಿಯುಳ್ಳುದೂ, ಸರ್ವಕ್ಕೂ ಪ್ರಥಮಸ್ಥಾನದಲ್ಲಿರುವುದೂ ಆಗಿ ವಿರಾಜಿಸುವುದು.

ಭಕ್ತಿಃ ಷಡಾಧಾರಗತಾ ಷಡಧ್ವಗಾ ಷಡ್ಭಾ ಸ್ಥಿತಾ ಷಟ್‌ಸ್ಥಲಿನೀ
ಷಡಕ್ಷರೀ
ಷಡ್ವರ್ಗ ಷಡ್‌ಭ್ರಾಂತಿಷಡೂರ್ಮಿದೂರ್ಗಮಾಷಟ್‌ತ್ರಿಂಶ
ತತ್ತ್ವಾತಿಶಯಾ ವಿರಾಜತೇ ೪೬

ಭಕ್ತಿಪ್ರಶಂಸಾಷ್ಟಕಮೇತದುತ್ತಮಂ ಭಕ್ತ್ಯರ್ಥಿಚೇತಾಃ
ಪಠತಿಸ್ವಯಂ ಯಃ
ಭಕ್ತ್ಯಾ ಸದಾ ಭಕ್ತಿಮತಾಂ ವರಃ ಪುಮಾನ್‌ಭಕ್ತಿಂ ಪರಾಮವ್ಯ-
ಭಿಚಾರಿಣೀಮಿಯಾತ್ ೪೭

ಭಕ್ತಿಸ್ವರೂಪಂ ಕಥಿತಂ ಮಯಾ ತೇ ಯದ್‌ಜ್ಞಾನತಃ
ಸಿದ್ಧಿರಿಹೈವ ತಸ್ಯಾಃ
ಯತ್‌ಸಿದ್ಧಿತಃ ಸಿದ್ಧ್ಯತಿ ತತ್‌ಪ್ರಸಾದಃ ಸಿದ್ಧಪ್ರಸಾದಃ
ಸ್ವಯಮೇವ ಮುಕ್ತಃ ೪೮

---

ಸೂ. ೪೬. ಭಕ್ತಿಯು ಆಧಾರಾದಿಷಟ್‌ಚಕ್ರಸ್ಥಿತವೂ, ವರ್ಣಾಧ್ವಾದಿ ಷಡಧ್ವಗತವೂ ಆಗಿರುವುದು. ಮತ್ತು ಶ್ರದ್ಧಾ ನಿಷ್ಠಾದಿ ಷಡ್ವಿಧರೂಪದಿಂದ ಭಕ್ತಾದಿಷಡಂಗಸ್ಥಲಗಳಲ್ಲಿರುವುದು. ಷಡಕ್ಷರಮಂತ್ರರೂಪವಾಗಿರು-ವುದು. ಕಾಮಕ್ರೋಧಾದಿ ಅರಿಷಡ್ವರ್ಗಗಳಿಗೂ ಷಡ್ಭ್ರಾಂತಿ ಷಡೂರ್ಮಿ-ಗಳಿಗೂ ದೂರವಾಗಿರುವುದು. ಮತ್ತು ಮೂವತ್ತಾರು ತತ್ತ್ವಗಳಲ್ಲಿ ಅಧಿಕವಾಗಿರುವುದು. ಈ ಪ್ರಕಾರವಾಗಿ ಭಕ್ತಿಯು ವಿರಾಜಿಸುವುದು.

ಸೂ ೪೭. ಭಕ್ತಿಯನ್ನು ಪಡೆಯಬೇಕೆಂಬಪೇಕ್ಷೆಯುಳ್ಳವನು ಯಾವನು ಉತ್ತಮವಾದ ಭಕ್ತಿಪ್ರಶಂಸಾಷ್ಟಕವಿದನ್ನು ನಿತ್ಯವೂ ಭಕ್ತಿಯಿಂದ ಪಠಣ ಮಾಡುವನೋ; ಆ ಪುರುಷನು ನಿರ್ದೋಷವಾದ ಶ್ರೇಷ್ಠಭಕ್ತಿಯನ್ನು ಪಡೆದು ಭಕ್ತಿಜ್ಞರಲ್ಲಿ ಶ್ರೇಷ್ಠನೆನಿಸುವನು.

ಸೂ. ೪೮. ಶಿಷ್ಯನೆ, ನಿನಗೆ ನಾನು ಭಕ್ತಿಯ ಸ್ವರೂಪವನ್ನು ಹೇಳಿದೆನು. ಈ ಭಕ್ತಿಸ್ವರೂಪಜ್ಞಾನದಿಂದ ಈ ಜನ್ಮದಲ್ಲಿಯೇ ಭಕ್ತಿಯು ಸಿದ್ಧಿಸುವುದು. ಭಕ್ತಿಯ ಸಿದ್ಧಿಯಿಂದ ಪ್ರಸಾದಸಿದ್ಧಿಯಾಗುವುದು. ಸಿದ್ಧಪ್ರಸಾದನು ತಾನೇ ಮುಕ್ತನೆನಿಸುವನು.

ಮುಕ್ತಸ್ಯೈವ ಭವೇದ್ಭಕ್ತಿರ್ಬದ್ಧಸ್ಯ ನ ಕದಾಚನ
ಭಕ್ತಸ್ಯೈವ ಹಿ ಮುಕ್ತಿಃ ಸ್ಯಾನ್ನಾಭಕ್ತಸ್ಯ ಕದಾಚನ ೪೯

ಪ್ರಸಾದಭಕ್ತಿಮುಕ್ತೀನಾಮೇಕದೇಶಸಮನ್ವಯಃ
ಅಪಿ ಮುಕ್ತೇರ್ಭವೇಜ್ಜನ್ಯಾ ಶೇಷೌ ದ್ವೌ ಜನಕೌ ಮತೌ ೫೦

ಪ್ರಸಾದೋ ಜನಕಃ ಪ್ರೋಕ್ತೋ ಜನನೀ ಭಕ್ತಿರೀರಿತಾ
ಅನಯೋರೈಕ್ಯಭಾವೇನ ಜನಿತಾ ಮುಕ್ತಿಕನ್ಯಕಾ ೫೧

ಪ್ರಕಾರೋಽಯಂ ಪ್ರಸಾದಃ ಸ್ಯಾತ್ಸಾಕಾರೋ ಭಕ್ತಿರುಚ್ಯತೇ
ಪ್ರಸಾದಪೂರ್ವಿಕಾಭಕ್ತಿರ್ಮುಕ್ತಿದೇತಿ ದಕಾರತಃ ೫೨

ಸೂ. ೪೯. ಮುಕ್ತನಿಗಲ್ಲದೆ ಬದ್ಧನಿಗೆ ಭಕ್ತಿಯು ಎಂದಿಗೂ ಸಂಭವಿಸಲಾರದು. ಮತ್ತು ಭಕ್ತನೇ ಮುಕ್ತನೆನಿಸುವನು. ಭಕ್ತಿರಹಿತನಿಗೆ ಎಂದಿಗೂ ಮುಕ್ತಿ ದೊರೆಯಲಾರದು.

ಸೂ. ೫೦. ಪ್ರಸಾದ-ಭಕ್ತಿ-ಮುಕ್ತಿ ಇವುಗಳಿಗೆ ಏಕ ಸ್ಥಾನದಲ್ಲಿ ಸಮನ್ವಯವಿದ್ದರೂ ಮುಕ್ತಿಯು ಜನ್ಯಸ್ಥಾನದಲ್ಲಿರುವುದು. ಪ್ರಸಾದ ಭಕ್ತಿಗಳು ಜನಕಸ್ಥಾನದಲ್ಲಿರುವವು.

ಸೂ. ೫೧. ಪ್ರಸಾದವು ಜನಕನು. ಭಕ್ತಿಯು ಜನನಿಯು. ಈ ಜನನೀಜನಕರ ಸಾಮರಸ್ಯಭಾವದಿಂದ ಮುಕ್ತಿಕನ್ಯೆಯು ಜನಿಸುವಳು.

ಸೂ. ೫೨. ಪ್ರಸಾದವೆಂಬ ಪದದಲ್ಲಿ - 'ಪ್ರ' ಎಂಬಕ್ಷರವು ಪ್ರಸಾದವನ್ನೂ, 'ಸಾ' ಎಂಬಕ್ಷರವು ಭಕ್ತಿಯನ್ನೂ ವಚಿಸುವವು. ಇನ್ನು 'ದಾ' ಎಂಬಕ್ಷರದಿಂದ ಪ್ರಸಾದಪೂರ್ವಕವಾದ ಭಕ್ತಿಯು ಮುಕ್ತಿದಾಯಕವೆಂಬರ್ಥವು ಸೂಚಿತವಾಗುವುದು.

ಪ್ರಸಾದಃ ಶಿವ ಏವ ಸ್ಯಾತ್‌ಭಕ್ತಿಃ ಶಕ್ತಿರ್ನ ಸಂಶಯಃ
ಏತತ್ಸಾಧರ್ಮ್ಯಮೇತೇಷಾಂ ವೈಧರ್ಮ್ಯಂ ನಾಸ್ತಿ ಕಿಂಚನ ೫೩

ಅಧಿಷ್ಠಾನೇ ಪ್ರಸಾದೇಽಸ್ಮಿನ್‌ಧಿಷ್ಠಾತ್ರೀ ಸ್ವಲೀಲಯಾ
ಚರತ್ಯನರ್ಗಲಾ ಭಕ್ತಿರ್ಯಥೇಷ್ಟಂ ಸ್ವಯಮೀಶ್ವರೀ ೫೪

---

ಸೂ. ೫೩. ಶಿವನೇ ಪ್ರಸಾದವು ಶಿವಶಕ್ತಿಯೇ ಭಕ್ತಿಯು. ಸಂಶಯ ವಿಲ್ಲ. ಪ್ರಸಾದಭಕ್ತಿರೂಪದಿಂದಿರುವ ಶಿವಶಕ್ತಿಯರಲ್ಲಿ ಸಮಾನಧರ್ಮ ವಿರುವುದಾಗಲಿ ಭಿನ್ನ ಧರ್ಮವಿರುವುದಿಲ್ಲ.

ಸೂ. ೫೪. ಅಧಿಷ್ಠಾನಭೂತ (ಆಶ್ರಯಸ್ಥಾನ) ವಾದ ಪ್ರಸಾದದಲ್ಲಿ (ಶಿವನಲ್ಲಿ) ಅಧಿಷ್ಠಾತ್ರಿಯಾಗಿ (ಅವಿನಾಭಾವಸಂಬಂಧದಿಂದ ಆಶ್ರಯವನ್ನು ಹೊಂದಿ) ಇರುವ ಭಕ್ತಿರೂಪವಾದ ಈಶ್ವರಿಯು ತನ್ನಿಷ್ಟದಂತೆ ಸ್ವಲೀಲೆ ಯಿಂದ ಅಡ್ಡಿಯಿಲ್ಲದೆ ವಿಹರಿಸುವಳು.

ವಿಚಾರ

ಷಟ್‌ಸ್ಥಲಾತ್ಮಕವಾದ ವೀರಶೈವ ಭಕ್ತಿಯು ಶಿವಶಕ್ತಿಸ್ವರೂಪದಿಂದಿರುವುದು. ಈ ಭಕ್ತಿಯಿಂದ ಶಿವರೂಪವಾದ ಪ್ರಸಾದವು ಪ್ರಾಪ್ತವಾಗುವುದು. ಈ ಭಕ್ತಿಯನ್ನೇ ಸೂತ್ರಕಾರನು ಶಿವಾನುಭವಸೂತ್ರದಲ್ಲಿ ಪಂಚಮಪುರುಷಾ-ರ್ಥವೆಂದು ಹೇಳಿರುವನು. ಇತರರು ಹೇಳುವ ಭಕ್ತಿಯ ಲಕ್ಷಣಗಳು ಭಕ್ತಿಭೇದಗಳಿಗೆ ಸಂಬಂಧಿಸಿರುವವು; ಅವು ಭಕ್ತಿಯ ಸಂಪೂರ್ಣ ಸ್ವರೂಪಕ್ಕೆ ಸಂಬಂಧಿಸುವುದಿಲ್ಲ. ಶಿವಶಕ್ತಿಯೇ ಭಕ್ತಿಯೆಂಬುದು ಭಕ್ತಿಸ್ವರೂಪದ ಸಂಪೂರ್ಣಲಕ್ಷಣವು. ಈ ಶಿವಶಕ್ತಿಯೇ ಶಿವಪ್ರೇಮ ವಾಗಿಯೂ, ಶಿವಜ್ಞಾನವಾಗಿಯೂ, ಶಿವಕ್ರಿಯೆಯಾಗಿಯೂ, ಶಿವಾನಂದ ವಾಗಿಯೂ–ಹೀಗೆ–ಭಿನ್ನಭಿನ್ನ ರೂಪದಿಂದ ಪರಿಣಮಿಸಿ ವಿಹರಿಸುವುದು. ಇದನ್ನೇ ಭಕ್ತಿರೂಪವಾದ ಈಶ್ವರಿಯ ಲೀಲೆಯೆಂದು ಕರೆಯುವರು. ಈ ಅಭಿಪ್ರಾಯವನ್ನೇ ಮೇಲಿನ ಸೂತ್ರಗಳ ಭಾವಾರ್ಥವು ಪುಷ್ಟೀಕರಿ-ಸುವುದು.

ಶಿಷ್ಯಃ.

ವೃತ್ತಂ: ಉಕ್ತಂ ಭವತಾ ಭಕ್ತಿಸ್ವರೂಪಮತಿಶೋಭನಂ ಮಹಾಸ್ವಾಮಿನ್
ಪದಾರ್ಥಕರಣಂ ಯತ್ತತ್ಸಮರ್ಪಣಂ ಗ್ರಹಣಮತ್ರ ಕಥಯಸ್ವ ೫೫

ಗುರು:

ಅನ್ನಂ ಪದಾರ್ಥರೂಪಂ ತತ್ಕರಣಂ ಕಲ್ಪನಾ ಸಮಾಖ್ಯಾತಾ
ಅರ್ಪಣಮನ್ನವಿಲೋಪೋ ಹ್ಯಾದಾನಂ ಗ್ರಹಣಮಿತ್ಯತೋ ವಿದ್ಧಿ ೫೬

ಕಾರಣಂ ಭಕ್ತಿರೇವಾತ್ರ ಪದಾರ್ಥಕರಣೇ ಸದಾ
ಭಾಂಡೇಷು ಬಹುಧಾ ನಾಮ ಗುಣರೂಪಾದಿಭೇದತಃ ೫೭

ಪ್ರಸಾದದಾಯಿನೀ ಯಾ ಸಾ ಪದಾರ್ಥಕರಣಕ್ಷಮಾ
ಸಮರ್ಪಣಕಲಾದಕ್ಷಾ ಭಕ್ತಿರವ್ಯಭಿಚಾರಿಣೀ ೫೮

---

ಶಿಷ್ಯ. ಸೂ.. ೫೫. ಮಹಾಸ್ವಾಮಿ, ಶುಭಕರವಾದ ಭಕ್ತಿಸ್ವರೂಪವು ನಿನ್ನಿಂದ ಉಕ್ತವಾದುದು. ಇನ್ನು ಪದಾರ್ಥಕರಣವನ್ನೂ, ತತ್ಸಮರ್ಪಣವನ್ನೂ, ಪ್ರಸಾದಗ್ರಹಣವನ್ನೂ ವಿವರಿಸು.

ಗುರು. ಸೂ. ೫೬. ಅನ್ನವು ಪದಾರ್ಥರೂಪವಿರುವುದು. ಪದಾರ್ಥಕರಣವೆಂಬುದು ಭಕ್ತಿಭಾವನದ ಕಲ್ಪನೆಯಾಗಿರುವುದು. ಇನ್ನು ಅನ್ನವಿಲೋಪಭಾವನೆಯೇ ಅರ್ಪಣವೆನಿಸುವುದು. ಅರ್ಪಿತ ಸ್ವೀಕಾರವು ಗ್ರಹಣವೆನಿಸುವುದೆಂದು ತಿಳಿ.

ಸೂ. ೫೭, ೫.೮, ೫೯. ಭಾಂಡಗಳಲ್ಲಿ ನಾಮಗುಣರೂಪಾದಿಗಳಿಂದ ಬಹು ಪ್ರಕಾರವಾಗಿರುವ ಅನ್ನವನ್ನು ಯಾವಾಗಲೂ ಏಕರೂಪವಾದ ಪದಾರ್ಥವನ್ನಾಗಿ ಮಾಡುವ ವಿಷಯದಲ್ಲಿ ಭಕ್ತಿಯೇ ಕಾರಣವಾಗಿರುವುದು (೫೭). ದೋಷರಹಿತವಾದ ಭಕ್ತಿಯು ಪದಾರ್ಥಕರಣದಲ್ಲಿಯೂ, ಸಮರ್ಪಣಕಲೆಯಲ್ಲಿಯೂ ದಕ್ಷವೆನಿಸಿಕೊಂಡು ಪ್ರಸಾದಪ್ರದವಾಗಿರುವುದು (೫೮). ಲೀಲಾರೂಪವಾದ ಮತ್ತು ಪರಮಕಾರಣವಾದ ಯಾವ

ವತ್ತೃಂ : ಭಾಂಡಂ ಪದಾರ್ಥಕರಣಾಯ ಸಮರ್ಪಣಾಯ ಯದ್ಭಾಜನಂ
ವಿತನುತೇ ಬಹುಧಾ ವಿಭಿನ್ನಂ
ಲೀಲಾಪರಾ ಪರಮಕಾರಣರೂಪಿಣೀ ಯಾ ಭಕಿಃ ಕಿಮತ್ರ
ಕಥಯಾಮಿತ್ವಾ ಮಹತ್ವಮಸ್ಯಾಃ ೫೯

ಶಿಷ್ಯಃ

ಪದಾರ್ಥಸ್ಯ ಪದಾರ್ಥತ್ವಂ ಪ್ರಸಾದಸ್ಯ ಪ್ರಸಾದತಾ
ಉಭಯೋರುಭಯೋರ್ಭಾವಃ ಸ್ವಭಾವೋ ನ ವಿಪರ್ಯಯಃ ೬೦

ಪದಾರ್ಥಸ್ಯ ಪ್ರಸಾದತ್ವಂ ನಾಸ್ತಿ ಕೇನಾಪಿ ಕರ್ಮಣಾ
ಪ್ರಸಾದಸ್ಯ ಪದಾರ್ಥತ್ವಂ ದೋಷಾಯ ಭವತಿ ಧ್ರುವಂ ೬೧

ಗುರು ಃ

ವೃ : ಪದಾರ್ಥ ಇತ್ಯತ್ರ ನ ಕಶ್ಚಿದಸ್ತಿ ದ್ವಿಧಾ ಕೃತಶ್ಚೇತಿ ನ ಸಂಮತೋಽತ್ರ
ಸಮರ್ಪಿಕಾ ಭಕ್ತಿರಥೋಪಚಾರಪ್ರಿಯಃ ಸದಾ ಶಂಭುರಿತಿ ಪ್ರತೀನೇ ೬೨

---

ಭಕ್ತಿಯಿರುವುದೋ; ಅದೇ ಭಕ್ತಿಯು ಬಹುಪ್ರಕಾರವಾಗಿರುವ ಅನ್ನವನ್ನು ಪದಾರ್ಥಕರಣಕ್ಕಾಗಿ ಭಾಂಡ (ಪಾಕಪಾತ್ರೆ) ವನ್ನೂ ಅರ್ಪಣಕ್ಕಾಗಿ ಭಾಜನ (ಭೋಜನಪಾತ್ರೆ) ವನ್ನೂ ಉಂಟುಮಾಡಿಕೊಳ್ಳುವುದು. ಹೀಗೆ ಮಾಡುವುದರಲ್ಲಿರುವ ಭಕ್ತಿಯ ಮಹತ್ತ್ವವನ್ನು ಏನು ಹೇಳಲಿ. (ಭಕ್ತಿ ಮಹತ್ತ್ವವು ನಿರುಪಮಾನವೆಂದು ತಾತ್ಪರ್ಯ) (೫೯).

ಶಿಷ್ಯ. ಸೂ. ೬೦, ೬೧. ಪದಾರ್ಥಕ್ಕೆ ಪದಾರ್ಥತ್ವವೆಂಬ ಭಾವವು ಸ್ವಭಾವವಾಗಿರುವುದು. ಪ್ರಸಾದಕ್ಕೆ ಪ್ರಸಾದತ್ವವೆಂಬ ಭಾವವೂ ಸ್ವಭಾವವಾಗಿರುವುದು. ಅವುಗಳ ಸ್ವಭಾವವು ವ್ಯತ್ಯಾಸವಾಗುವುದಿಲ್ಲ (೬೦). ಯಾವ ಕರ್ಮದಿಂದಲೂ ಪದಾರ್ಥಕ್ಕೆ ಪ್ರಸಾದತ್ವವನ್ನುಂಟುಮಾಡಲಾಗುವುದಿಲ್ಲ. ಇನ್ನು ಪ್ರಸಾದದಲ್ಲಿ ಪದಾರ್ಥತ್ವವಿರುವುದೆಂಬುದು ದೋಷಪ್ರದವೆಂಬುದು ನಿಜ.

ಗುರು. ಸೂ. ೬೨, ೬೩, ೬೪. ಪದಾರ್ಥದಲ್ಲಿ ಯಾವ ಭೇದವೂ ಇಲ್ಲ. ಅದನ್ನು ಎರಡು ಭಾಗಮಾಡುವುದೂ ಸರಿಯಲ್ಲ. ಆದರೆ, ಯಾವಾಗಲೂ

ಭಕ್ತಿರ್ಭಜತೇ ಭಾಗಂ ವಿಭಾಗಮಪಿ ವಿಭಜತೇ ವಿಭಕ್ತತಯಾ
ಏಕಂ ವಿಷಯಂ ದ್ರವ್ಯಂ ಪ್ರಸಾದರೂಪೇಣ ದಾನ ಆದಾನೇ ೬೨

ಅನ್ನಾದಿಯತ್ಕಲ್ಪಿತವಸ್ತು ತಸ್ಯ ನಾಸ್ತಿ ಪ್ರಸಾದತ್ವಮಿತೀಹ ಸಿದ್ಧಂ
ಭಕ್ತ್ಯಾ ಪ್ರಸಾದಸ್ಯ ಪದಾರ್ಥಭಾವೋ ದೋಷಾಯ ನಾಯಂ
ನ ಗುಣಾಯ ನೈಜಂ ೬೪

ಶಿಷ್ಯ :

ಜ್ಞಾತಂ ಪದಾರ್ಥಕರಣಂ ಗುರುನಾಥ ಯುಷ್ಮತ್ಕಾರುಣ್ಯತೋ
ವದ ಸಮರ್ಪಣಮತ್ರ ಸತ್ಯಂ

ಗುರು :

ವಕ್ಷ್ಯಾಮಿ ತೇ ಶೃಣು ಸಮರ್ಪಣಮತ್ಯಪೂರ್ವಂ ಸೂಕ್ಷ್ಮಂ
ಪದಂ ಸುಲಭಮದ್ವಯಭಕ್ತಿಭಾಜಾಂ ೬೫

---

ಉಪಚಾರಪ್ರಿಯನು ಶಿವನು, ಸಮರ್ಪಣ ಮಾಡುವುದು ಭಕ್ತಿಯೆಂಬುದು ಪ್ರಸಿದ್ಧ (೬೨). ಭಕ್ತಿಯು ವಿಭಾಗವಾಗದುದನ್ನು ಭಾಗಮಾಡುತ್ತದೆ. ಪ್ರಸಾದರೂಪದಿಂದಿರುವ ಒಂದೇ ವಸ್ತುವನ್ನು ಭಕ್ತಿಯು ಸಮರ್ಪಣದಲ್ಲಿ ಪದಾರ್ಥವನ್ನಾಗಿಯೂ, ಸ್ವೀಕರಣದಲ್ಲಿ ಪ್ರಸಾದವನ್ನಾಗಿಯೂ ಭಾಗಿಸು-ವುದು (೬೩). ಅನ್ನಾದಿರೂಪದಿಂದ ಕಲ್ಪಿತವಾದ ವಸ್ತುವಿನಲ್ಲಿ ಪ್ರಸಾದತ್ವ ವಿಲ್ಲೆಂಬುದು ಸಿದ್ಧ. ಆದರೆ, ಭಕ್ತಿಯಿಂದ ಪ್ರಸಾದಕ್ಕೆ ಪದಾರ್ಥಭಾವ ವನ್ನು ಹೇಳುವುದು ದೋಷವೂ ಅಲ್ಲ; ಗುಣವೂ ಅಲ್ಲ. ಅದು ಭಕ್ತಿಗೆ ಸಹಜವೆನಿಸುವುದು.

ಶಿಷ್ಯ. ಸೂ. ೬೫. ಗುರುನಾಥ, ನಿಮ್ಮ ಕಾರುಣ್ಯದಿಂದ ಪದಾರ್ಥಕರಣ ವಿಷಯವು ವಿದಿತವಾದುದು. ಈ ಸಂದರ್ಭದಲ್ಲಿ ನಿಜವಾದ ಅರ್ಪಣ ವಿಷಯವನ್ನು ತಿಳಿಸು.

ಗುರು : ನಿನಗೆ, ಅತ್ಯಪೂರ್ವವೂ ಸೂಕ್ಷ್ಮವೂ ಆಗಿದ್ದರೂ ಭಕ್ತಿವಂತರಿಗೆ ಸುಲಭವಾಗಿರುವ ಅರ್ಪಣವನ್ನು ಹೇಳುವೆನು ಕೇಳು.

ಯದ್ಭಾಜನಸ್ಥಂ ವಿನಿವೇದ್ಯಮಾನಮನ್ನಾದಿಕಂ ಭಾಂಡಗತಂ
ತದಂಶಂ
ಲಿಂಗಾರ್ಪಿತಂ ಭಾಜನಸಂಸ್ಥಿತಂ ಚೇದ್ಭಾಂಡಸ್ಥಿತಂ ಚೈವ
ಸಮರ್ಪಿತಂ ಸ್ಯಾತ್ ೬೬

ಶಿಷ್ಯ ಃ

ಕಥಂ ಪ್ರಭೋ ಚಿತ್ರಮಿದಂ ಸಮರ್ಪಣಂ ಸಮರ್ಪಿತಂ
ಭಾಜನಸಂಸ್ಥಿತಂ ಯದಿ
ಸಮರ್ಪಿತಂ ಭಾಂಡಗತಂ ತದಂಶಕಂ ಪದಾರ್ಥರೂಪಂ
ಪೃಥಗಾಹಿತಂ ಭವೇತ್ ೬೭

ಗುರು ಃ

ಪೃಥಕ್ತ್ವಮೇಕಸ್ಯ ನ ಚಾಸ್ತಿ ವಸ್ತುನಃ ಸ್ವರೂಪನಾಮಾರ್ಥ-
ಗುಣಾದಿಸಾಮ್ಯತಃ
ವಿಭಕ್ತಮಪ್ಯೇತದರಥೋಕ್ತಲಕ್ಷಣಾದ್ವಿಚಾರಿತೇ ಸತ್ಯ-
ವಿಭಕ್ತಮೇವ ಹಿ ೬೮

---

ಗುರು. ಸೂ. ೬೬. ಅನ್ನಾದಿಕವು ಭಾಂಡ (ಪಾಕಪಾತ್ರೆ) ದಲ್ಲಿರುವುದು. ಆ ಅನ್ನಾದಿಕದ ಭಾಗವು ಲಿಂಗನೈವೇದ್ಯಕ್ಕಾಗಿ ಭಾಜನ (ಭೋಜನ ಪಾತ್ರೆ) ದಲ್ಲಿರುವುದಷ್ಟೇ. ಭಾಜನದಲ್ಲಿರುವುದು ಲಿಂಗಾರ್ಪಿತವಾದರೆ ಭಾಂಡದಲ್ಲಿರುವುದೂ ಲಿಂಗಾರ್ಪಿತವಾಗುವುದು.

ಶಿಷ್ಯ. ಸೂ. ೬೭. ಅದು ಹೇಗೆ ? ಪ್ರಭು, ಅರ್ಪಣವಿಷಯವಿದು ಆಶ್ಚರ್ಯವು. ಲಿಂಗಭಾಜನದಲ್ಲಿರುವುದು ಅರ್ಪಿತವಾದರೆ ಭಾಂಡಗತವಾದುದೂ ಸಮರ್ಪಿತವಾಗುವುದು ಹೇಗೆ ? ಭಾಂಡದಲ್ಲಿರುವುದು ಪದಾರ್ಥರೂಪದಿಂದ ಬೇರೆಯಾಗಿಯೇ ಇರುವುದಲ್ಲವೆ ?

ಗುರು. ಸೂ. ೬೮. ಸ್ವರೂಪ-ನಾಮ-ಅರ್ಥ-ಗುಣಾದಿಗಳಲ್ಲಿ ಸಾಮ್ಯವಿರುವ ಒಂದೇ ವಸ್ತುವಿನಲ್ಲಿ ಭಿನ್ನತೆಯಿರುವುದಿಲ್ಲ. ಹಿಂದೆ ಹೇಳಿದ ಭಕ್ತಿಲಕ್ಷಣದಿಂದ ಅದು ಭಿನ್ನವಾಗಿ ತೋರಿದರೂ ವಿಚಾರಮುಖದಲ್ಲಿ ಅಭಿನ್ನವಾಗಿಯೇ ಇರುವುದು.

ಶಿಷ್ಯ :

ಯದ್ದೃಶ್ಯಮಾನಂ ಪುರತಃ ಪ್ರತೀತಮನ್ನಾದಿರೂಪಂ ಶಿವಭಾಜನಸ್ಥಂ
ಶಿವಾರ್ಪಿತಂ ಚೇದ್ವಿಪರೀತಮನ್ಯತ್ತ್ರದಂಶರೂಪಂ ಕಥಮರ್ಪಿತಂ
ಸ್ಯಾತ್ ೧೯

ಗುರು :

ಅದೃಶ್ಯರೂಪಂ ಯದಿ ಭಾಂಡಸಂಸ್ಥಮದೃಶ್ಯಮಪ್ಯೇವ ಹಿ ಭಾಜನಸ್ಥಂ
ತಿರೋಹಿತತ್ವಾದುಪರಿಸ್ಥಿತೇನ ಪದಾರ್ಥರೂಪೇಣ ತದಂತರಸ್ಥಂ ೨೦

ಅನರ್ಪಿತಂ ಭಾಂಡಗತಾಂಶಮೇವ ಚೇತ್ಸಮರ್ಪಿತಂ
ಚಾಪಿ ನ ಚಾರ್ಪಿತಂ ಸ್ಯಾತ್
ದ್ವಯೋರನುಸ್ಯೂತನಿರಂತರಸ್ಥಿತಃ ಪ್ರಸಾದಭಾವಾನುಪಪತ್ತಿ-
ಕಾರಣಾತ್ ೨೧

---

ಶಿಷ್ಯ. ಸೂ. ೧೯. ಯಾವುದು ಮುಂಭಾಗದಲ್ಲಿ ಶಿವಭಾಜನದಲ್ಲಿದ್ದು, ದೃಶ್ಯರೂಪದಿಂದ ಅನ್ನಾದಿಕವು ತಿಳಿಯಲ್ಪಟ್ಟಿರುವುದೋ; ಅದು ಶಿವಾರ್ಪಿತವಾದರೆ, ಭಾಂಡದಲ್ಲಿ ಅದೃಶ್ಯರೂಪದಿಂದಿರುವ ಅನ್ನಾದಿಕಭಾಗವೂ ಅರ್ಪಿತವಾಗುವುದೆಂಬುದು ಹೇಗೆ ?

ಗುರು. ಸೂ. ೨೦. ಭಾಂಡದಲ್ಲಿರುವುದು ಅದೃಶ್ಯವೆಂಬ ಪಕ್ಷದಲ್ಲಿ ಭಾಜನದಲ್ಲಿರುವುದೂ ಅದೃಶ್ಯವೆನಿಸುವುದು. ಏಕೆಂದರೆ, ಭಾಂಡಭಾಜನಗಳಲ್ಲಿರುವ ಪದಾರ್ಥರೂಪದಿಂದ ಪದಾರ್ಥಾಂತರ್ಗತವಾದ ಅರ್ಪಣರೂಪವು ಅದೃಶ್ಯವಾಗಿರುವುದಲ್ಲವೆ ? ಆದುದರಿಂದ :

ಸೂ. ೨೧. ಭಾಂಡಗತಾಂಶವು ಅನರ್ಪಿತವೆಂದು ಹೇಳಿದರೆ, ಅರ್ಪಿತವಾದ ಭಾಜನಗತಾಂಶವೂ ಅನರ್ಪಿತವೆನಿಸುವುದು. ಏಕೆಂದರೆ-ಭಾಂಡಭಾಜನಗಳಲ್ಲಿರುವ ಪದಾರ್ಥಗಳಲ್ಲಿ ಏಕರೂಪವಿರುವುದರಿಂದ ಭಾಂಡಸ್ಥಪದಾರ್ಥವನ್ನು ಬಿಟ್ಟು ಭಾಜನಸ್ಥಪದಾರ್ಥದಲ್ಲಿ ಮಾತ್ರ ಪದಾರ್ಥಭಾವನೆಯುಂಟಾಗಲಾರದಲ್ಲವೆ ?

ಶಿವಾರ್ಪಿತಾಶೇಷಪದಾರ್ಥಜಾತೌ ವಿಲಕ್ಷಣಂ ಯತ್ತದನರ್ಪಿತಂ
ಸ್ಯಾತ್
ನ ಭಾಂಡಸಂಸ್ಥಂ ನ ಸಮಾಗತಂ ಚ ನ ಚಾನ್ಯದಿತ್ಯಾಚರತೇ
ಹಿ ಭಕ್ತಿಃ ೭೨

ಶಿಷ್ಯ :

ಗುರೋ ಶಿವಾರ್ಪಿತದ್ರವ್ಯವಿಲಕ್ಷಣಮಿತೀಹ ಕಿಂ
ಕೃಪಯಾ ವದ ಮೇ ಸ್ವಾಮಿನ್ ಶಿವಾರ್ಪಣವಿದಾಂ ವರ ೭೩

ಗುರು :

ವೃತ್ತಂ : ಶಿವಾಶ್ರಮಾಚಾರಬಹಿಷ್ಕೃತಂ ಯಚ್ಛಿವಾರ್ಪಿತದ್ರವ್ಯ-
ವಿಲಕ್ಷಣಂ ತತ್
ತದಂತರೇಣಾಽರ್ಪಿತಮೇವ ಸರ್ವಂ ಶಿವಸ್ಯ ಭಕ್ತೇಃ
ಪರಮಪ್ರಭಾವಾತ್ ೭೪

—— · ——

ಸೂ. ೭೨. ಶಿವಾರ್ಪಿತವಾಗುವ ಬಹುವಿಧಪದಾರ್ಥಸಮೂಹಕ್ಕೆ ವಿಲಕ್ಷಣವಾದುದು ಯಾವುದೋ; ಅದು ಮಾತ್ರ ಅನರ್ಪಿತವೆನಿಸುವುದು. ಅರ್ಪಣವಸ್ತುವು ಭಾಂಡದಲ್ಲಿರಲಿ, ಮುಂಭಾಗದಲ್ಲಿರಲಿ ಅಥವಾ ಬೇರೆ ಯಾಗಿರಲಿ ಅದನ್ನು ಭಕ್ತಿಯು ಅನರ್ಪಿತವೆಂದು ತಿಳಿದಾಚರಿಸುವುದಿಲ್ಲ.

ಶಿಷ್ಯ. ಸೂ. ೭೩. ಶಿವಾರ್ಪಣಜ್ಞರಲ್ಲಿ ಶ್ರೇಷ್ಠನಾದ ಗುರುಸ್ವಾಮಿಯೆ, ಅರ್ಪಣವಿಷಯದಲ್ಲಿ ಶಿವಾರ್ಪಿತದ್ರವ್ಯಕ್ಕೆ ವಿಲಕ್ಷವಾದುದು ಯಾವುದು ? ಕೃಪೆಯಿಂದ ಹೇಳು.

ಗುರು. ಸೂ. ೭೪. ಶಿವಾಶ್ರಮಾಚಾರದಿಂದ ಬಹಿಷ್ಕೃತವಾದುದಾವುದುಂಟೋ; ಅದು ಶಿವಾರ್ಪಿತದ್ರವ್ಯವಿಲಕ್ಷಣವೆನಿಸುವುದು. ವಿಲಕ್ಷಣವಸ್ತು-ವನ್ನುಳಿದುದೆಲ್ಲವೂ ಭಕ್ತಿಯ ಪರಮ ಪ್ರಭಾವದಿಂದ ಶಿವಾರ್ಪಿತವಸ್ತುವೆನಿಸುವುದು.

ಶಿಷ್ಯ :

ವೃ : ಪುರಾ ಪ್ರಸಾದಾತ್ಮತಯಾ ಸ್ಥಿತಸ್ಯ ಪದಾರ್ಥರೂಪಸ್ಯ ಸಮರ್ಪಣೇನ
ಅನೇನ ಕಾ ಸಿದ್ಧಿರಥೋಪದಿಷ್ಟಾದ್ವದ ಪ್ರಭೋ ಲಿಂಗಮುಖೇ
ಯಥಾರ್ಥಂ ೭೫

ಗುರು :

ಘೃತಾತ್ಮಕಂ ಯನ್ನವನೀತಮಾದ್ಯಂ ಪ್ರತಾಪಿತಂ
ವಹ್ನಿಮುಖೇ ನಿಜಂ ಸ್ಯಾತ್
ಯಥಾ ತಥಾ ಲಿಂಗಮುಖಾರ್ಪಿತಂ ಯದ್ಭವೇತ್ಪ್ರಸಾದಾತ್ಮಕ-
ಮನ್ನಮಾದ್ಯಂ ೭೬

ರೌಪೆ ಯಥಾಽಽಲೋಕಯ ಶುಕ್ತಿಕಾಯಾಂ ಲುಪ್ತೆ ಸ್ವಯಂ
ಶಿಷ್ಯತ ಏವ ಯಾ ಸಾ
ತದ್ವತ್ಪ್ರಸಾದಸ್ಯ ಪದಾರ್ಥಭಾವೇ ಲುಪ್ತೇ ಸ್ವಯಂ
ಶಿಷ್ಯತ ಏವ ವಸ್ತು ೭೭

---

ಶಿಷ್ಯ. ಸೂ. ೭೫. ಪ್ರಭುವೆ, ತಾವು ಉಪದೇಶಿಸಿದಂತೆ ಸರ್ವವೂ ಶಿವಾರ್ಪಿತವಸ್ತುವಾದರೆ, ಅದೆಲ್ಲವೂ ಪ್ರಸಾದವೆನಿಸಿರುವುದು. ಹೀಗೆ ಮೊದಲೇ ಪ್ರಸಾದರೂಪದಿಂದಿರುವ ಪದಾರ್ಥವನ್ನು ಪುನಃ ಲಿಂಗಮುಖ ದಲ್ಲಿ ಅರ್ಪಿಸುವುದರಿಂದ ಯಾವ ಸಿದ್ಧಿಯಿರುವುದು ಇದರ ನಿಜಸ್ವರೂಪ ವನ್ನು ತಿಳಿಸು.

ಗುರು. ಸೂ. ೭೬. ಹೇಗೆ ಮೊದಲು ಘೃತರೂಪವನ್ನೊಳಕೊಂಡಿದ್ದ ನವನೀತವು (ಬೆಣ್ಣೆ) ಅಗ್ನಿಮುಖದಲ್ಲಿ ಕಾಸಲ್ಪಟ್ಟರೆ, ಅದು ತನ್ನ ನೈಜವಾದ ಘೃತರೂಪದಿಂದ ತೋರುವುದೋ; ಹಾಗೆ ಮೊದಲು ಪ್ರಸಾದರೂಪವನ್ನೊಳ ಕೊಂಡಿದ್ದ ಅನ್ನಾದಿಪದಾರ್ಥವು ಲಿಂಗಮುಖದಲ್ಲಿ ಅರ್ಪಿತವಾಗಲಾಗಿ ತನ್ನ ನೈಜವಾದ ಪ್ರಸಾದರೂಪದಿಂದ ಶೋಭಿಸುವುದು.

ಸೂ. ೭೭. ಶುಕ್ತಿಯಲ್ಲಿ (ಮುತ್ತಿನ ಚಿಪ್ಪಿನಲ್ಲಿ) ಭ್ರಾಂತಿಯಿಂದ ತೋರಿದ ರಜತಭಾವವು ಲುಪ್ತವಾದೊಡನೆ ಶುಕ್ತಿಸ್ವರೂಪವೇ ಉಳಿಯುವಂತೆ ಪ್ರಸಾದದಲ್ಲಿ ಅರ್ಪಣಭಾವದಿಂದ ತೋರಿದ ಪದಾರ್ಥಭಾವವು ಲುಪ್ತವಾಗಿ ಪ್ರಸಾದರೂಪವೇ ಪ್ರಕಾಶಿಸುವುದು.

ಪದಾರ್ಥಸ್ಯ ಪ್ರಸಾದತ್ವಂ ಭಾವ್ಯಪಿ ಪ್ರಾಗಭಾವತಃ
ನ ಸಿದ್ಧ್ಯತಿ ಹಿ ಯತ್ಪ್ರಾಚ್ಯಂ ತದೇವೋಪರಿ ಸಿದ್ಧ್ಯತಿ ೭೮

ಪ್ರಸಾದಭಾವಾನುಪಪತ್ತಿದೃಷ್ಟಮನರ್ಪಿತಂ ದ್ರವ್ಯಮಿತೀಹ ಸಿದ್ಧಂ
ಸಮರ್ಪಿತಂ ದ್ರವ್ಯವಿಲೋಪಶಿಷ್ಟಂ ಪ್ರಸಾದರೂಪಂ ಭಜತೇ ತದೇವ ೭೯

ಶಿಷ್ಯ :

ಶಿವಾರ್ಪಣಂ ಚಾತ್ರ ಪದಾರ್ಥಭಾವವಿಲೋಪ ಏವೇತಿ
ನಿರೂಪಿತಂ ಮೇ
ಅಜಾನವಾನ್ ವ್ಯಕ್ತಮಹಂ ಮಹಾತ್ಮನ್ ವದ
ಪ್ರಸಾದಗ್ರಹಣಂ ಯದೇತತ್ ೮೦

---

ಸೂ. ೭೮. ಪದಾರ್ಥದಲ್ಲಿ ಮೊದಲೇ ಪ್ರಸಾದತ್ವವಿಲ್ಲದಿದ್ದರೆ ಅರ್ಪಣಾನಂತರದಲ್ಲಿಯೂ ಪದಾರ್ಥದಲ್ಲಿ ಪ್ರಸಾದಸ್ವರೂಪವು ಉಂಟಾಗಲಾರದು. ಯಾವ ಸ್ವರೂಪವು ವಸ್ತುವಿನಲ್ಲಿ ಮೊದಲಿರುವುದೋ ಅದೇ ಸ್ವರೂಪವೇ ಅನಂತರದಲ್ಲಿಯೂ ತೋರುವುದಲ್ಲವೆ ?

ಸೂ. ೭೯. ಯಾವ ವಸ್ತುವಿನಲ್ಲಿ ಪ್ರಸಾದಭಾವನೆಯುಂಟಾಗದೆ, ಅದು ದೃಷ್ಟವಾಗುವುದೋ ಅದನ್ನೇ ಅನರ್ಪಿತ ದ್ರವ್ಯವೆಂದು ಕರೆಯುವುದು ಪ್ರಸಿದ್ಧವು. ಯಾವ ವಸ್ತುವು ಶಿವಸಮರ್ಪಿತವಾಗಲಾಗಿ, ಅದರಲ್ಲಿ ದ್ರವ್ಯಲೋಪಭಾವವುಂಟಾಗುವುದೋ; ಅದು ಪ್ರಸಾದಸ್ವರೂಪವನ್ನು ಹೊಂದುವದು.

ಶಿಷ್ಯ. ಸೂ. ೮೦. ಮಹಾತ್ಮನೆ, ಅರ್ಪಣ ವಿಷಯದಲ್ಲಿ-ಪದಾರ್ಥಭಾವ ವಿಲೋಪವೇ ಶಿವಾರ್ಪಣವೆಂದು ನಿರೂಪಿತವಾದುದನ್ನು ನಾನು ಚೆನ್ನಾಗಿ ತಿಳಿದುಕೊಂಡೆನು. ಇನ್ನು ಪ್ರಸಾದಗ್ರಹಣ ವಿಷಯವಾವುದು ಅದನ್ನು ಹೇಳು.

ಗುರುಃ

ವಕ್ಷ್ಯೇ ಪ್ರಸಾದಗ್ರಹಣಂ ಸುದುರ್ಲಭಂ ಭಕ್ತ್ಯಾ
ಶೃಣುಷ್ವೇತದತೀವ ಶೋಭನಂ
ಉಚ್ಛಿಷ್ಟಭಾವಾನುಪಪತ್ತಿರೇವ ಯಾ ತದ್ಧಿ
ಪ್ರಸಾದಗ್ರಹಣಂ ನಿರಂತರಂ ೮೧

ಶಿಷ್ಯಃ

ಉಚ್ಛಿಷ್ಟಶಬ್ದೇನ ಕಿಮುಚ್ಯತೇಽತ್ರ ಸತ್ಯಾರ್ಥಮೇತಸ್ಯ
ವದ ಪ್ರಭೋ ಮೇ

ಗುರುಃ

ಭುಕ್ತ್ಯಾವಶಿಷ್ಟಂ ಶೃಣು ಯನ್ನಿಷಿದ್ಧಮುಚ್ಛಿಷ್ಟಮಿತ್ಯೇಷ
ಹಿ ಲೋಕವಾದಃ ೮೨

ಶಿಷ್ಯಃ

ತರ್ಹಿ ತ್ವಯಾಸ್ಯಾನುಪಪತ್ತಿರುಕ್ತಾ ನಿಷಿದ್ಧಭೂತಸ್ಯ
ವಿಭೋ ಕಿಮೇತತ್
ಆದಾನಮಿತ್ಯೇವ ಶಿವೋಪಭುಕ್ತಪ್ರಸಾದರೂಪಸ್ಯ ವದಸ್ವ ಸತ್ಯಂ ೮೩

---

ಗುರು. ಸೂ. ೮೧. ಪ್ರಸಾದಗ್ರಹಣವು ಎಲ್ಲರಿಗೂ ಸುಲಭಸಾಧ್ಯವಲ್ಲ. ಭಕ್ತಿಯಿಂದ ಕೇಳು ಅತ್ಯಂತ ಶುಭರೂಪವಾದ ಅದನ್ನು ಹೇಳುತ್ತೇನೆ. ಯಾವಾಗಲೂ ಯಾವುದರಲ್ಲಿ ಉಚ್ಛಿಷ್ಟ ಭಾವನೆಯ ಎಂಟಾಗುವುದಿಲ್ಲವೋ ಅದನ್ನು ಗ್ರಹಿಸುವುದೇ ಪ್ರಸಾದಗ್ರಹಣವೆನಿಸುವುದು.

ಶಿಷ್ಯ. ಸೂ. ೮೨. ಉಚ್ಛಿಷ್ಟ ಶಬ್ದದಿಂದ ಹೇಳಿದುದೇನು ? ಪ್ರಭುವೆ, ಆ ಶಬ್ದದ ಸತ್ಯವಾದರ್ಥವನ್ನು ತಿಳಿಸು.
ಗುರು : ಯಾವುದು ಭುಕ್ತಾವಶೇಷವೋ ಅದನ್ನು ಪುನಃ ಭುಂಜಿಸುವುದು ನಿಷಿದ್ಧವು. ಅದನ್ನೇ ಉಚ್ಛಿಷ್ಟವೆಂದು ಕರೆಯುವ ಲೋಕರೂಢಿಯಿರುವುದು.

ಶಿಷ್ಯ. ಸೂ. ೮೩. ಲೋಕರೂಢಿಯು ಹಾಗಿದ್ದ ಪಕ್ಷದಲ್ಲಿ ನಿಷಿದ್ಧ ಭೂತವಾದ ಉಚ್ಛಿಷ್ಟದ ಅನುಪಪತ್ತಿಯು (ಉಚ್ಛಿಷ್ಟಭಾವನೆಯ ಅಭಾವವು)

ಗುರುಃ

ನೋಚ್ಛಿಷ್ಟಭಾವೋ ನ ನಿಷಿದ್ಧಭಾವಃ ಸಾಕ್ಷಾತ್ಪ್ರಸಾದೇ
ಪರಮೇ ಪವಿತ್ರೇ
ಭೋಗೇ ಪ್ರಸಾದಸ್ಯ ಋತಂ ಶೃಣು ತ್ವಂ ಭುಕ್ತೇ ಚ
ತಸ್ಮಿನ್ನ ಹಿ ಸಂಭವೋಽಸ್ತಿ ೮೪

ಪ್ರಸಾದ ಉಚ್ಛಿಷ್ಟನಿಷಿದ್ಧಭಾವೋ ಘಟೇತ ಚೇನ್ನೈವ ಭವೇತ್ಪ್ರಸಾದಃ
ಅಭಾವತಶ್ಚಾಸ್ಯ ನ ಚಾಸ್ತಿ ಲಿಂಗಂ ಗುರುರ್ನ
ಚಾಸ್ತಿ ಕ್ರಮತೋ ನಿಪಾತಃ ೮೫

ಶಿಷ್ಯಃ

ಮೈವಂ ನಿರೂಪಯ ವಿಭೋ ನ ನಿಷಿದ್ಧಮಾಹುರ್ಭುಕ್ತಂ
ಶಿವೇನ ಪರಮಂ ಯಮಿಮಂ ಪ್ರಸಾದಂ
ನೋಚ್ಛಿಷ್ಟಮಪ್ಯಥ ನಿಷಿದ್ಧಧಿಯಾಽಽತ್ಮಭುಕ್ತಂ ಯದ್ಯಸ್ತಿ
ತಸ್ಯ ಕತಿಚಿತ್ ಘಟಯಂತಿ ದೋಷಂ ೮೬

---

ನಿನ್ನಿಂದ ಉಕ್ತವಾದುದೇಕೆ? ಶಿವೋಪಭುಕ್ತ ಪ್ರಸಾದಗ್ರಹಣವೆಂಬುದೇನು? ಅದರಲ್ಲಿ ಉಚ್ಛಿಷ್ಟತ್ವವಿಲ್ಲವೆ? ಪ್ರಭುವೆ, ಇದರ ನಿಜವನ್ನು ಹೇಳು.

ಗುರು. ಸೂ. ೮೪. ನೀನು ಪ್ರಸಾದದ ಭೋಗದಲ್ಲಿರುವ ನಿಜವನ್ನು ಕೇಳು. ಶ್ರೇಷ್ಠವೂ ಪವಿತ್ರವೂ ಆದ ಆ ಶಿವಭುಕ್ತಾವಶೇಷಪ್ರಸಾದವು ಭುಂಜಿಸಲ್ಪಟ್ಟರೆ, ಆ ಭುಕ್ತಪ್ರಸಾದದಲ್ಲಿ ಉಚ್ಛಿಷ್ಟಭಾವವೂ ಸಂಭವಿಸುವುದಿಲ್ಲ.

ಸೂ. ೮೫. ಪ್ರಸಾದದಲ್ಲಿ ಉಚ್ಛಿಷ್ಟನಿಷಿದ್ಧಭಾವವುಂಟಾದರೆ, ಅದು ಪ್ರಸಾದವೆನಿಸುವುದಿಲ್ಲ. ಪ್ರಸಾದವೆನಿಸದಾಗ ಲಿಂಗವಿಲ್ಲ. ಗುರುವಿಲ್ಲ. ಹೀಗೆ ಕ್ರಮವಾಗಿ ಪ್ರಸಾದ-ಲಿಂಗ-ಗುರುತತ್ತ್ವಗಳ ನಿಪಾತವು (ಚ್ಯುತಿಯು) ಪ್ರಾಪ್ತವಾಗುವುದು.

ಸೂ. ೮೬. ಪ್ರಭುವೆ, ಹೀಗೆ ನಿರೂಪಿಸಬೇಡ. ಶಿವನಿಂದ ಭುಕ್ತವಾದ ಯಾವ ಶ್ರೇಷ್ಠವಾದ ಪ್ರಸಾದವುಂಟೋ ಅದನ್ನು ನಿಷಿದ್ಧವೆಂದೂ, ಉಚ್ಛಿಷ್ಟವೆಂದೂ ಹೇಳುವುದಿಲ್ಲ. ಆದರೆ, ಜೀವಾತ್ಮನು ಯಾವುದನ್ನು ಭುಂಜಿಸುವನೋ ಅದಕ್ಕೆ ಕೆಲವರು ನಿಷೇಧಬುದ್ಧಿಯಿಂದ ದೋಷಸಂಬಂಧವನ್ನು ಹೇಳುವರು.

ಗುರುಃ

ಪ್ರಾಗಾತ್ಮದೋಷಮುಪನೀಯ ಶಿವಪ್ರಸಾದಂ ಪಶ್ಚಾನ್ನ
ಭೋಕ್ತುಮಯಮರ್ಹತಿ ಚೇತಿ ವೇದಃ
ರೋಗೀ ಸ್ವರೋಗಮುಪನೀಯ ಪುರಾ ನ ಪಶ್ಚಾದ್ಭೈಷಜ್ಯ-
ಮತ್ತುಮಯಮರ್ಹತಿ ಚೇತಿ ತದ್ವತ್ ೮೭

ರೋಗಾರ್ಥಮೌಷಧಂ ಸೇವ್ಯಂ ದೋಷಾರ್ಥಂ ಚಾತ್ಮನಸ್ತಥಾ
ಸೇವ್ಯಃ ಶಿವಪ್ರಸಾದೋಽಯಮಿತಿ ಶೈವೀ ಪರಾ ಸ್ಥಿತಿಃ ೮೮

ವೃತ್ತಂ : ಆತ್ಮೋಪಭೋಗಾತ್ಪ್ರಥಮಂ ಪ್ರಸಾದರೂಪಂ ಯದಿ
ಸ್ಯಾತ್ತಮಪಿ ಪ್ರಶಸ್ತಂ
ಲಿಂಗಾರ್ಪಿತಂ ಪ್ರಾಥಮಿಕಂ ಸ್ವಭೋಗಾನ್ನೋಚೇತ್-
ಸ್ವಭುಕ್ತಂ ವಿನಿಷಿದ್ಧಮೇವ ೮೯

---

ಗುರು. ಸೂ. ೮೭. ರೋಗಿಯು ತನ್ನ ರೋಗವನ್ನು ಕಳೆದುಕೊಂಡ ಮೇಲೆ ಔಷಧಸೇವನೆಗೆ ಅರ್ಹನಾಗಲಾರನು. ಅದರಂತೆ ಜೀವಾತ್ಮನು ಮೊದಲು ದೋಷವನ್ನು ಕಳೆದುಕೊಂಡಿದ್ದರೆ ಅವನು ಶಿವಪ್ರಸಾದಭೋಗಕ್ಕೆ ತಕ್ಕವನಲ್ಲವೆಂದು ವೇದೋಕ್ತಿಯಿರುವುದು.

ಸೂ. ೮೮. ರೋಗಪರಿಹಾರಾರ್ಥವಾಗಿ ಔಷಧವು ಸೇವ್ಯವಾಗುವಂತೆ ಜೀವಾತ್ಮದೋಷನಿವಾರಣಾರ್ಥವಾಗಿಯೇ ಶಿವಪ್ರಸಾದವು ಸೇವ್ಯವಾಗಿರು-ವುದೆಂಬುದೇ ಶ್ರೇಷ್ಠವಾದ ಶಿವಸಂಬಂಧ ಸ್ಥಿತಿಯು.

ಸೂ. ೮೯. ಲಿಂಗಾರ್ಪಿತವಾದುದು ತಾನು ಭೋಗಿಸುವುದಕ್ಕೆ ಮೊದಲು ಪ್ರಸಾದರೂಪದಿಂದ ಪ್ರಶಸ್ತವಾಗಿರುವಂತೆ ತಾನು ಭೋಗಿಸಿದನಂತರವೂ ಅದು ಪ್ರಶಸ್ತವಾಗಿಯೇ ಇರುವುದು. ಆದರೆ, ಲಿಂಗಾರ್ಪಿತವಿಲ್ಲದೆ ತಾನು ಮೊದಲೇ ಭೋಗಿಸಿದರೆ ಅದು ನಿಷಿದ್ಧವೆನಿಸುವುದು.

ಶಿಷ್ಯ :

ನೇತ್ಥಂ ಪ್ರಭೋ ಕೇಚನ ಲಿಂಗಭುಕ್ತಮಪ್ಯಾತ್ಮ-
ಜಿಹ್ವೇಂದ್ರಿಯದೂಷಿತಂ ಚೇತ್
ಉಚ್ಛಿಷ್ಟಭಾವಂ ವ್ರಜತೀತಿ ಲೋಕೇ ತಸ್ಯ ಪ್ರಸಾದಸ್ಯ
ನಿಷೇಧಮಾಹುಃ ೯೦

ಗುರು :

ವೃ: ಪಂಚಭಿರಿಂದ್ರಿಯಕರಣೈರ್ಭುಕ್ತಾನಾಂ ಸ್ವಾತ್ಮಭೋಗವಿಷಾಯಾಣಾಂ
ಏಕಂ ತತ್ರೋಚ್ಛಿಷ್ಟಂ ಶೇಷಂ ನೋಚ್ಛಿಷ್ಟಮಿತ್ಯಸದ್ವಾದಃ ೯೧

ಉಚ್ಛಿಷ್ಟಂ ಚೇತ್ಸರ್ವಂ ಚೋಚ್ಛಿಷ್ಟಂ ಭುಕ್ತಮಿಂದ್ರಿಯೈಃ ಸಕಲೈಃ
ನೋಚ್ಛಿಷ್ಟಂ ಚೇತ್ಸರ್ವಂ ನೋಚ್ಛಿಷ್ಟಂ ಭುಕ್ತಮಿಂದ್ರಿಯೈಃ ಸಕಲೈಃ ೯೨

ಅಸಂಸ್ಕೃತಾತ್ಮೇಂದ್ರಿಯಭೂತಕಾಯೈರಲಿಂಗಿಭಿಃ
ಸ್ವಾರ್ಥಪರೈಃ ಸಕಾಮೈಃ
ದೃಷ್ಟಂ ಶ್ರುತಂ ಸ್ಪೃಷ್ಟಮಥೋಪಭುಕ್ತಂ
ಘ್ರಾತಾದ್ಯಮುಚ್ಛಿಷ್ಟಮಿತಿ ಪ್ರಸಿದ್ಧಂ ೯೩

---

ಶಿಷ್ಯ. ಸೂ. ೯೦. ಹೀಗಲ್ಲ ಪ್ರಭುವೆ, ಲೋಕರೂಢಿಯಲ್ಲಿ ಕೆಲವರು ಲಿಂಗಾರ್ಪಿತವಾದ ಪ್ರಸಾದವಾದರೂ ಜೀವಾತ್ಮನ ಜಿಹ್ವೇಂದ್ರಿಯ ಸಂಬಂಧವನ್ನು ಹೊಂದಿದಾಗ ದೂಷಿತವಾಗಿ ಉಚ್ಛಿಷ್ಟತ್ವವನ್ನು ಹೊಂದುವುದೆಂದು ಹೇಳಿ, ಆ ಪ್ರಸಾದಕ್ಕೆ ನಿಷೇಧವನ್ನು ಹೇಳುವರು.

ಗುರು. ಸೂ. ೯೧, ೯೨. ಐದು ಇಂದ್ರಿಯಗಳಿಂದ ಭುಂಜಿಸಲ್ಪಟ್ಟ ಜೀವಾತ್ಮಭೋಗವಿಷಯಗಳಲ್ಲಿ ಜಿಹ್ವೇಂದ್ರಿಯದಿಂದ ಭುಂಜಿಸಿದುದು ಉಚ್ಛಿಷ್ಟವು. ಉಳಿದುದಲ್ಲವೆಂಬುದು ಅಸದ್ವಾದವೆನಿಸುವುದು (೯೧). ಉಚ್ಛಿಷ್ಟವಾಗುವುದಾದರೆ ಐದಿಂದ್ರಿಯಗಳಿಂದ ಭುಕ್ತವಾದುದೂ ಉಚ್ಛಿಷ್ಟವಾಗಬೇಕು. ಹಾಗಿಲ್ಲದಿದ್ದರೆ ಯಾವದೊಂದೂ ಉಚ್ಛಿಷ್ಟವಾಗಬಾರದು (೯೨).

ಸೂ. ೯೩, ೯೪. ಶಿವದೀಕ್ಷಾಸಂಸ್ಕಾರವನ್ನು ಪಡೆಯದ ದೇಹ-ಇಂದ್ರಿಯ ಆತ್ಮಗಳುಳ್ಳವರು ಅಲಿಂಗಿಗಳೆನಿಸುವರು. ಸ್ವಾರ್ಥಪರರೂ ಸಕಾಮಕರ್ಮಿಗಳೂ ಆದ ಆ ಅಲಿಂಗಿಗಳು ಭುಂಜಿಸಿದ, ನೋಡಿದ, ಮುಟ್ಟಿದ,

ಅತೀಂದ್ರಿಯೈರವಿಷಯೈರಕಾಮ್ಯೈಃ ಷಟ್‌ಸ್ಥಲಾತ್ಮಭಿಃ
ಯದ್ಭುಕ್ತಂ ತದ್ಧಿ ನೋಚ್ಛಿಷ್ಟಂ ನ ನಿಷಿದ್ಧಂ ನ ದೂಷಿತಂ ೯೪

ಶಿಷ್ಯಃ

ವೃತ್ತಂ: ಅತೀಂದ್ರಿಯತ್ವಾದಿಗುಣೈರುಪೇತಾಸ್ತೇ ಕೇ ಮಮ
ಬ್ರೂಹಿ ದಯಾಪಯೋಧೇ

ಗುರುಃ

ಕೃತಾರ್ಥ ವಕ್ಷ್ಯೇ ಪರಮಂ ರಹಸ್ಯಂ ಕಸ್ಯಾಪ್ಯನುಕ್ತಂ
ತವ ಭಕ್ತಿಭಾಜಃ ೯೫

ಆತೀಂದ್ರಿಯತ್ವಾದಿಗುಣೋಪಪನ್ನಾ ಭಕ್ತಾದಯಃ
ಷಟ್‌ಸ್ಥಲವರ್ತಿನಃ ಸ್ಯುಃ
ಸಮರ್ಪಿತಾತ್ಮೇಂದ್ರಿಯಗೋಚರತ್ವಾದಾಚಾರಲಿಂಗಾದಿಷು
ಕಾಮವರ್ಜ್ಯಾಃ ೯೬

---

ಆಘ್ರಾಣಿಸಿದುದೇ ಮೊದಲಾದ ವಿಷಯಭೋಗದಲ್ಲಿ ಉಚ್ಛಿಷ್ಟತೆಯಿರುವುದೆಂಬುದು ಪ್ರಸಿದ್ಧವು (೯೩). ಅತೀಂದ್ರಿಯರೂ, ವಿಷಯರಹಿತರೂ, ಕಾಮರಹಿತರೂ ಆಗಿ, ಷಟ್‌ಸ್ಥಲಾತ್ಮಸ್ವರೂಪಿಗಳಾದವರು ಭೋಗಿಸಿದುದು ಉಚ್ಛಿಷ್ಟವೂ, ನಿಷಿದ್ಧವೂ, ದೂಷಿತವೂ ಆಗುವುದಿಲ್ಲ (೯೪).

ಶಿಷ್ಯ. ಸೂ. ೯೫. ದಯಾಸಮುದ್ರನೆ, ಅತೀಂದ್ರಿಯತ್ವಾದಿಗುಣಗಳಿಂದ ಕೂಡಿದವರು ಯಾರು ನನಗೆ ಹೇಳು.

ಗುರು : ಕೃತಾರ್ಥನೆ, ಭಕ್ತಿಸಂಪನ್ನನಾದ ನಿನಗೆ ಯಾರಿಗೂ ಹೇಳದಿರುವ ಪರಮರಹಸ್ಯವನ್ನು ಹೇಳುವೆನು :

ಸೂ. ೯೬. ಭಕ್ತಾದಿಯಾಗಿರುವ ಷಟ್‌ಸ್ಥಲಗಳ ಆಚರಣದಲ್ಲಿ ಇರುವವರೇ ಅತೀಂದ್ರಿಯತ್ವಾದಿಗುಣಗಳಿಂದ ಕೂಡಿದವರು. ಅವರು ಆಚಾರಾದಿ ಷಡ್ಲಿಂಗಗಳಲ್ಲಿ ತಮ್ಮ ಆತ್ಮ-ಇಂದ್ರಿಯ-ಇಂದ್ರಿಯಭೋಗ-ಇವುಗಳನ್ನು ಸಮರ್ಪಿಸಿ, ಕಾಮವರ್ಜಿತರಾಗಿರುವರು.

ಶಿಷ್ಯ :

ದೇಹ ಆತ್ಮಾ ವಿಭೋ ಪ್ರಾಣ ಇಂದ್ರಿಯಂ ವಿಷಯಸ್ತತಃ
ತೃಪ್ತಿಶ್ಚೇತಿ ಷಡೇತೈರ್ಹಿ ಮೂರ್ತಂ ಕಥಮತೀಂದ್ರಿಯಂ ೯೭

ಗುರು :

ಆಚಾರೋಽಯಂ ದೇಹ ಆತ್ಮಾ ಗುರುಸ್ತತ್ಪ್ರಾಣೋ
ಲಿಂಗಂ ಸ್ಯಾಚ್ಚರಶ್ಚೇಂದ್ರಿಯಂ ಹಿ
ಪ್ರಾಸಾದೋಽಸೌ ಗೋಚರೋ ಯನ್ಮಹತ್ಸ್ಯಾತ್ತೃಪ್ತಿಃ
ಸಾಕ್ಷಾತ್ ಷಟ್‌ಸ್ಥಲಬ್ರಹ್ಮಮೂರ್ತಿಃ ೯೮

ಆಚಾರಾಹ್ವಯಲಿಂಗಮಸ್ಯ ವಪುರಾತ್ಮಾ ಗೌರವಂ ಲಿಂಗಕಂ
ಪ್ರಾಣಃಸ್ಯಾಚ್ಛಿವಲಿಂಗಮಿಂದ್ರಿಯಸಮೂಹಸ್ತದ್ವದೇವ ಸ್ವಯಂ
ಪ್ರೋಕ್ತಂ ಯಚ್ಚರಲಿಂಗಮೇಷ ವಿಷಯಪ್ರಾಸಾದಲಿಂಗಂ ತಥಾ
ತೃಪ್ತಿಃ ಷಟ್‌ಸ್ಥಲರೂಪಿಣಸ್ತವ ಕಿಮಾಚಕ್ಷೇ ಮಹಾಲಿಂಗಕಂ ೯೯

---

ಶಿಷ್ಯ. ಸೂ. ೯೭. ವಿಭುವೆ, ದೇಹ, ಆತ್ಮ, ಪ್ರಾಣ, ಇಂದ್ರಿಯ, ಇಂದ್ರಿಯ ವಿಷಯ, ವಿಷಯ ತೃಪ್ತಿ – ಈ ಆರರಿಂದ ಮೂರ್ತಸ್ವರೂಪನಾದವನು ಹೇಗೆ ಅತೀಂದ್ರಿಯನೆನಿಸುವನು ?

ಗುರು. ಸೂ. ೯೮, ೯೯. ಷಟ್‌ಸ್ಥಲವರ್ತಿಯಾಗಿ ಷಟ್‌ಸ್ಥಲಬ್ರಹ್ಮಮೂರ್ತಿಯಾದವನ ದೇಹ, ಆತ್ಮ, ಪ್ರಾಣ, ಇಂದ್ರಿಯ, ಇಂದ್ರಿಯವಿಷಯ, ವಿಷಯತೃಪ್ತಿ – ಇವುಗಳು ಪರಿವಿಡಿಯಿಂದ ಆಚಾರ, ಗುರು, ಲಿಂಗ, ಜಂಗಮ, ಪ್ರಸಾದ, ಪ್ರಸಾದತೃಪ್ತಿಯೆಂದು ಕರೆಯಿಸಿಕೊಳ್ಳುವವು (೯೮). ಎಂದರೆ ಷಟ್‌ಸ್ಥಲರೂಪಿಯಾದವನ ದೇಹವೇ ಆಚಾರಲಿಂಗವು. ಅವನ ಆತ್ಮವೇ ಗುರುಲಿಂಗವು. ಅವನ ಪ್ರಾಣವೇ ಶಿವಲಿಂಗವು. ಅವನ ಇಂದ್ರಿಯಗಳೇ ಜಂಗಮಲಿಂಗವು. ಅವನ ಇಂದ್ರಿಯ ವಿಷಯಗಳೇ ಪ್ರಸಾದಲಿಂಗವು. ಅವನ ವಿಷಯತೃಪ್ತಿಯೇ ಮಹಾಲಿಂಗವು. ಅವನ ಮಹತ್ತ್ವವನ್ನು ಏನು ಹೇಳಲಿ.

ಶಿಷ್ಯಃ

ಉಕ್ತಮಾಚಾರಲಿಂಗಾದಿ ಷಡ್ವಿಧಂ ಭವತಾ ಪುರಾ
ಸ್ವಾತ್ಮಾನುಷ್ಠೇಯರೂಪತ್ವಾದ್ವದ ಕಾರುಣಿಕೋತ್ತಮ ೧೦೦

ಗುರುಃ

ಭೂತಿಃ ಸ್ನಾನಂ ತ್ರಿಪುಂಡ್ರಾಂಕಂ ರುದ್ರಾಕ್ಷಾಣಾಂ ತು ಧಾರಣಂ
ಆಚಾರಲಿಂಗಮಾಚಾರ್ಯೈಃ ಪ್ರೋಕ್ತಮಾಚಾರತಃ ಸದಾ ೧೦೧

ಮೂಲಪಂಚಾಕ್ಷರೀ ವಿದ್ಯಾ ಪ್ರಣವೇನ ಷಡಕ್ಷರೀ
ಆಜ್ಞಾಸಿದ್ಧೋ ಮಹಾಮಂತ್ರೋ ಗುರುಲಿಂಗಮಿಹೋಚ್ಯತೇ ೧೦೨

ಸ್ವಾಂಗಸ್ಥಮಿಷ್ಟಮಚಲಂ ಕರಪೀಠೇ ಸಮಾಹಿತಂ
ಮೂಲಮಂತ್ರಾರ್ಥವಿಷಯಂ ಶಿವಲಿಂಗಮುದೀರ್ಯತೇ ೧೦೩

---

ಶಿಷ್ಯ. ಸೂ. ೧೦೦. ಕಾರುಣಿಕೋತ್ತಮನೆ, ಮೊದಲು ನಿನ್ನಿಂದ ಆಚಾರಾದಿ ಷಡ್ವಿಧಲಿಂಗವು ಉಕ್ತವಾಗಿದ್ದಿತು. ಈಗ ಆ ಷಡ್ವಿಧಲಿಂಗಗಳ ಅನುಷ್ಠಾನಯೋಗ್ಯವಾದ ಸ್ವರೂಪವನ್ನು ತಿಳಿಸು.

ಗುರು. ಸೂ. ೧೦೧. ಷಟ್‌ಸ್ಥಲಮಾರ್ಗದಿಂದ ಯಾವಾಗಲೂ ಆಚರಿಸುವವನಿಗೆ ಭಸ್ಮಸ್ನಾನ ಮತ್ತು ಭಸ್ಮತ್ರಿಪುಂಡ್ರಧಾರಣವೂ ರುದ್ರಾಕ್ಷಧಾರಣವೂ ಆಚಾರಲಿಂಗವಾಗಿರುವುದೆಂದು ಆಚಾರ್ಯರಿಂದ ಉಕ್ತವಾಗಿರುವುದು.

ಸೂ. ೧೦೨. ಮೂಲಪಂಚಾಕ್ಷರೀ ವಿದ್ಯೆಯು ಓಂಕಾರಪ್ರಣವದಿಂದ ಸಹಿತವಾಗಲಾಗಿ ಷಡಕ್ಷರೀ ವಿದ್ಯೆಯೆನಿಸುವುದು. ಗುರೂಪದೇಶ ಸಿದ್ಧವಾದ ಆ ಷಡಕ್ಷರಮಂತ್ರವೇ ಷಟ್‌ಸ್ಥಲಾಚರಣದಲ್ಲಿ ಗುರುಲಿಂಗವಾಗಿರುವುದು.

ಸೂ. ೧೦೩. ತನ್ನಂಗದಲ್ಲಿ ಅಚಲವಾಗಿರುವ ಇಷ್ಟಲಿಂಗವು ಷಡಕ್ಷರ ಮಂತ್ರದ ಅರ್ಥಕ್ಕೆ ವಿಷಯವಾಗಿರುವುದು. ಅದು ಉಪಾಸನೆಗಾಗಿ ಕರಪೀಠಕ್ಕೆ ಬಂದಾಗ ಶಿವಲಿಂಗಸ್ವರೂಪವಾಗಿರುವುದು.

ಅರ್ಚನಾರ್ಪಣಸದ್ಭಾವಕ್ರಿಯಾರೂಪಂ ತ್ರಿಸಾಧನಂ
ಉಪಚಾರೈರುಪೇತಂ ಯಚ್ಚರಲಿಂಗಂ ತದುಚ್ಯತೇ ೧೦೪

ಕ್ರಿಯಾಕಲಾಪವಿಸ್ತಾರಪರಿಣಾಮೋದಿತಂ ಫಲಂ
ಯದ್ವಸ್ತು ತತ್ಪ್ರಸಾದಾಖ್ಯಂ ಲಿಂಗಮಿತ್ಯಭಿಧೀಯತೇ ೧೦೫

ಆದಾನಸೇವನಾವಾಪ್ತತೃಪ್ತಿರೂಪಂ ನಿರಂತರಂ
ಸುಖಂ ನಿರುಪಮಂ ನಿತ್ಯಂ ತನ್ಮಹಾಲಿಂಗಮಿಷ್ಯತೇ ೧೦೬

---

ಸೂ. ೧೦೪. ಅರ್ಚನ, ಅರ್ಪಣ, ಸದ್ಭಾವ (ಸದ್ಭಕ್ತಿಭಾವ) ವೆಂಬ ತ್ರಿಸಾಧನದಿಂದ ಕೂಡಿದುದೂ ಉಪಚಾರಗಳಿಂದ ಸಹಿತವಾದುದೂ ಆದ ಯಾವ ಉಪಾಸನಕ್ರಿಯೆಯಿರುವುದೋ ಅದೇ ಜಂಗಮಲಿಂಗಸ್ವರೂಪ ವಾಗಿರುವುದು.

ಸೂ. ೦೫. ಈ ಬಗೆಯ ಅರ್ಚನ-ಅರ್ಪಣಾದಿಕ್ರಿಯಾಕಲಾಪವಿಸ್ತಾರದ ಪರಿಣಾಮವಾಗಿ ಉದಿಸಿದ ಫಲಸ್ವರೂಪವಸ್ತುವೇ (ಪ್ರಸಾದವೇ) ಪ್ರಸಾದ ಲಿಂಗವೆಂದು ಕರೆಯಿಸಿಕೊಳ್ಳುವುದು.

ಸೂ. ೧೦೬. ಆ ಪ್ರಸಾದವನ್ನು ಸ್ವೀಕರಿಸಿ, ಸೇವಿಸುವುದರಿಂದ ಉಂಟಾಗುವ ನಿರಂತರ ತೃಪ್ತಿಯೇ ನಿರುಪಮವಾದ ನಿತ್ಯಸುಖಸ್ವರೂಪ ವಾದ ಮಹಾಲಿಂಗವೆಂದು ಉಕ್ತವಾಗಿರುವುದು.

## ವಿಚಾರ

ಸೂತ್ರಕಾರನು ೫೬ನೆಯ ಸೂತ್ರದಿಂದ ೧೦೬ನೆಯ ಸೂತ್ರದ ವರೆಗೂ ಗುರುಶಿಷ್ಯಸಂವಾದರೂಪದಿಂದ ಪ್ರಸಾದಸದ್ಭಾವವನ್ನು ವಿಸ್ತಾರವಾಗಿ ವಿವರಿಸಿರುವನು. ಷಟ್‌ಸ್ಥಲಾಚರಣೆಗೆ ಪ್ರಸಾದಭೋಗ, ಅದರಿಂದುಂಟಾ ಗುವ ತೃಪ್ತಿ ಇವುಗಳೇ ಫಲವು. ಜಗತ್ತಿನ ಸತ್ಪದಾರ್ಥಗಳೆಲ್ಲವೂ ಪ್ರಸಾದವಾಗಿ ಪರಿಣಮಿಸಬೇಕು. ಆತ್ಮನು ಆ ಪ್ರಸಾದಭೋಗಿಯಾಗಿ ತೃಪ್ತನಾಗಬೇಕು. ಆ ತೃಪ್ತಿಯು ನಿತ್ಯವಾದುದು. ಲಿಂಗಾನಂದರೂಪ ವಾದುದು. ಅದೇ ಲಿಂಗಭೋಗೋಪಭೋಗಜನ್ಯವಾದ ಶಿವಸುಖವು.

ಶಿಷ್ಯಃ

ಸ್ವಾತ್ಮಾನುಷ್ಠೇಯರೂಪತ್ವಾತ್ಪ್ರೋಕ್ತಂ ಷಟ್‌ಸ್ಥಲಮಾದಿತಃ
ನಿರುಕ್ತಿರುಚ್ಯತಾಮತ್ರ ಷಣ್ಣಾಮೇಷಾಂ ಸ್ವರೂಪತಃ ೧೦೭

---

ಅದನ್ನು ಪಡೆದವನು ಮುಕ್ತಜೀವಿಯು. ಈ ಸ್ಥಿತಿಯನ್ನು ಪಡೆಯುವುದೇ ಷಟ್‌ಸ್ಥಲಾಚರಣದ ಗುರಿ. ಜಗತ್ತಿನ ಸತ್ಪದಾರ್ಥಗಳು ಪ್ರಸಾದರೂಪವಾಗಿ ಪರಿಣಮಿಸಬೇಕಾದರೆ ದೇಹ, ಆತ್ಮ, ಪ್ರಾಣ, ಇಂದ್ರಿಯ-ಇವುಗಳು ಮೊದಲು ಶುದ್ಧವಾಗಬೇಕು, ಲಿಂಗರೂಪವಾಗಬೇಕು. ಇದಕ್ಕಾಗಿ ಷಟ್‌ಸ್ಥಲಾಭ್ಯಾಸಿಯು ಮೊದಲು ಸದಾಚಾರಿಯಾಗಿರಬೇಕು. ಸದಾಚಾರದಿಂದ ಭೌತಿಕದೇಹವು ಲಿಂಗದೇಹವಾಗಿ ಪರಿಣಮಿಸುವುದು. ಈ ದೇಹವೇ ಆಚಾರಲಿಂಗಸ್ವರೂಪವಾದುದೆಂದು ಉಕ್ತವಾಗಿರುವುದು. ಗುರುಬೋಧೆಯಿಂದ ಆತ್ಮನು ಅಹಂಕಾರ ಮಮಕಾರ ರೂಪವಾದ ಭ್ರಾಂತಿಯನ್ನು ತ್ಯಜಿಸಿ, ಲಿಂಗಜ್ಞಾನಮಯನಾಗಿ ಗುರುಲಿಂಗಸ್ವರೂಪನಾಗುವನು. ಇದರಂತೆ ಆತನ ಪ್ರಾಣವು ವಾಯುರೂಪವಾಗಿರದೆ ಲಿಂಗಮಯಪ್ರಾಣವಾದರೆ ಅದು ಶಿವಲಿಂಗಸ್ವರೂಪವನ್ನು ಪಡೆಯುವುದು. ಮತ್ತು ಆತ್ಮನ ಇಂದ್ರಿಯಗಳ ಚಂಚಲತ್ವವಡಗಿ, ವಿಷಯಭೋಗವನ್ನು ಬಿಟ್ಟು, ಅವುಗಳು ಲಿಂಗಪ್ರಸಾದಭೋಗಕ್ಕೆ ತಕ್ಕವುಗಳಾಗಬೇಕು. ಆಗ ಆ ಇಂದ್ರಿಯಗಳು ಜಂಗಮಲಿಂಗಸ್ವರೂಪವಾಗುವವು. ಈ ಸ್ಥಿತಿಯನ್ನು ಪಡೆದ ಭಕ್ತನಿಗೆ ಜಗತ್ತಿನ ಸತ್ಪದಾರ್ಥಸಮೂಹವು ಶಿವಪ್ರಸಾದರೂಪವಾಗಿ ಕಾಣುವುದು. ಈ ರೀತಿಯಾಗಿ ಕಂಡ ಪ್ರಸಾದವೇ ಪ್ರಸಾದಲಿಂಗವು. ಈ ಪ್ರಸಾದಭೋಗದಿಂದ ಜನಿಸಿದ ತೃಪ್ತಿಯೇ ಮಹಾಲಿಂಗ. ಆ ಮಹಾಲಿಂಗ (ತೃಪ್ತಿ) ದಲ್ಲಿ ಸಮರಸಹೊಂದಿದ ಭಕ್ತನು ಷಟ್‌ಸ್ಥಲಸ್ವರೂಪನಾಗಿ ಕಂಗೊಳಿಸುವನು. ಭಕ್ತನ ಈ ಸ್ಥಿತಿಯನ್ನೇ ಸೂತ್ರಕಾರನು ೯೮-೯೯ ನೆಯ ಸೂತ್ರಗಳಲ್ಲಿ ನಿರೂಪಿಸಿರುವನು.

ಶಿಷ್ಯ. ಸೂ. ೧೦೭. ಗುರುವೆ ಆತ್ಮಾನುಷ್ಠೇಯರೂಪವಾದ ಷಟ್‌ಸ್ಥಲವು ಉಕ್ತವಾದುದು. ಇನ್ನು ಆ ಷಟ್‌ಸ್ಥಲಗತ ಷಡ್ಲಿಂಗಗಳ ನಿರ್ವಚನವನ್ನು ಹೇಳು.

ಗುರು :

ಅನಾತ್ಮಾತ್ಮೇತ್ಯುಭೇ ತತ್ತ್ವೇ ವೇದಿತವ್ಯೇ ವಿವೇಕತಃ
ಅನಾತ್ಮರೂಪೋ ದೇಹಾದಿರಾತ್ಮಾ ತದ್ವ್ಯತಿರಿಚ್ಯತೇ ೧೦೮

ಅನಾತ್ಮಾಚಾರೋ ನಾಚಾರ ಈರಿತಃ ಸಮಲಃ ಸುಖಂ
ದೇಹಾದಿಧರ್ಮೋ ಹ್ಯಜ್ಞಾನಲಕ್ಷಣೋ ಲೌಕಿಕೋ ಜಡಃ ೧೦೯

ಅನಾತ್ಮಾಚಾರತತ್ತ್ವಜ್ಞೈರನಾಚಾರಃ ಪ್ರಕೀರ್ತಿತಃ
ಆತ್ಮಾಚಾರೋ ಹ್ಯದೇಹಾದಿಧರ್ಮಃ ಸುಜ್ಞಾನಲಕ್ಷಣಃ
ಅಲೌಕಿಕಃ ಸ್ಯಾದಜಡಃ ಸದ್ಭಿರಾಚಾರ ಆವೃತಃ ೧೧೦

---

### ಆಚಾರಾದಿ ಸ್ವರೂಪದ ನಿರ್ವಚನ

ಗುರು. ಸೂ. ೧೦೮ ರಿಂದ ೧೧೦. ವಿವೇಕದಿಂದ ಅನಾತ್ಮ ಮತ್ತು ಆತ್ಮವೆಂಬೆರಡು ತತ್ತ್ವಗಳು ತಿಳಿಯತಕ್ಕವಾಗಿರುವವು. ದೇಹಾದಿರೂಪವಾದುದು ಅನಾತ್ಮವೆಂದೂ ತದ್ವ್ಯತಿರಿಕ್ತವಾದುದು ಆತ್ಮವೆಂದೂ ಹೇಳಲ್ಪಡುವುದು (೧೦೮). ಅನಾತ್ಮಕ್ಕೆ (ದೇಹಾದಿಗಳಿಗೆ) ಸಂಬಂಧಿಸಿದ ಆಚಾರವು ಅನಾಚಾರವೆನಿಸುವುದು. ಏಕೆಂದರೆ ಅದು ಮಲ (ದುಃಖ) ಸಹಿತವಾದ ಸುಖರೂಪವಾಗಿರುವುದು. ದೇಹಾದಿ ಧರ್ಮವು ಅಜ್ಞಾನ ಲಕ್ಷಣದಿಂದ ಕೂಡಿ, ಲೌಕಿಕವೂ ಜಡವೂ ಎನಿಸುವುದು (೧೦೯). ಆದುದರಿಂದಲೇ ಅನಾತ್ಮಾಚಾರತತ್ತ್ವಜ್ಞರು ದೇಹಾದಿಗಳಿಗೆ ಸಂಬಂಧಿಸಿದ ಆಚಾರವನ್ನು ಅನಾಚಾರವೆಂದು ಹೇಳುವರು. ಇನ್ನು ಸುಜ್ಞಾನಲಕ್ಷಣದಿಂದ ಕೂಡಿದ ಆತ್ಮಧರ್ಮವು ಅಲೌಕಿಕವೂ, ಅಜಡವೂ ಆಗಿರುವುದು. ಆದುದರಿಂದ ಆತ್ಮಸಂಬಂಧವಾದ ಆಚಾರವೇ ಸದಾಚಾರವೆಂದು ಸತ್ಪುರುಷರಿಂದ ಅಂಗೀಕರಿಸಲ್ಪಟ್ಟಿರುವುದು (೧೧೦).

ಭೂತಿಃ ಪರಾನುಭೂತಿರ್ಹಿ ಸ್ನಾನಂ ತತ್ರಾವಗಾಹನಂ
ತ್ರಿಪುಂಡ್ರಂ ತ್ರಿಗುಣಾಭಾವೋ ಹ್ಯಲಿಂಗಂ ಲಿಂಗಮೇವ ಚ ೧೧೧

ಮನೋಮುಖಾನಿ ಚಾಕ್ಷಾಣಿ ರುದ್ರಾಕ್ಷಾಣಿ ವಿಧಾಯ ವೈ
ಚತುರ್ದಶ ಕ್ರಮಾದ್ಧಾರ್ಯಾಣ್ಯೇತದ್ರುದ್ರಾಕ್ಷಧಾರಣಂ ೧೧೨

ಪಂಚ ಷಡ್ವಿಧತತ್ತ್ವಾನಿ ಕ್ಷೀಯಂತೇ ಚ ಸಮಾಸತಃ
ಯಾಸ್ಯಾಂ ಪಂಚಾಕ್ಷರೀ ಸಾ ಚೇತ್ಸ್ವಯಮೇವ ಷಡಕ್ಷರೀ ೧೧೩

---

ಸೂ. ೧೧೧. ಪರತತ್ತ್ವಾನುಭೂತಿಯೇ ವಿಭೂತಿಯೆಂದು ತಿಳಿದು, ಆ ಪರತತ್ತ್ವಾನುಭೂತಿಯಲ್ಲಿ ಅವಗಾಹನಮಾಡುವುದೇ ಭೂತಿಸ್ನಾನವೆನಿಸುವುದು. ಸತ್ವರಜೋತಮೋಮಯವಾದ ತ್ರಿಗುಣಗಳ ಅಭಾವವೇ ತ್ರಿಪುಂಡ್ರಧಾರಣದ ಚಿಹ್ನವಾಗಿರುವುದು- ಈ ಸೂತ್ರದಲ್ಲಿ "ಅಲಿಂಗಂ ಲಿಂಗಮೇವ ತತ್" ಎಂಬ ವಾಕ್ಯಕ್ಕೆ ಮಾಡಬಹುದಾದ ಅಲಿಂಗವೇ ಲಿಂಗವೆಂಬರ್ಥದ ಭಾವವು ಅಸ್ಫುಟವಾಗಿರುವುದು.

ಸೂ. ೧೧೨. ಮನಸ್ಸಿನ ಮುಖಗಳಂತಿರುವವು ಚತುರ್ದಶಕರಣಗಳು. (ಬಹಿಃಕರಣಗಳು ೧೦, ಅಂತಃಕರಣಗಳು ೪,) ಇವುಗಳನ್ನು ೧ ರಿಂದ ೧೪ ರ ವರೆಗೂ ಮುಖಗಳಿರುವ ರುದ್ರಾಕ್ಷಗಳನ್ನಾಗಿ ಮಾಡಿಕೊಂಡು, ಧರಿಸುವುದೇ ರುದ್ರಾಕ್ಷಧಾರಣವೆನಿಸುವುದು.

ಸೂ. ೧೧೩. ಪಂಚಾಕ್ಷರಗಳಲ್ಲಿ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬೈದು ತತ್ತ್ವಗಳನ್ನೂ ಷಡಕ್ಷರಗಳಲ್ಲಿ ಆತ್ಮನಿಂದ ಕೂಡಿದ ಪೃಥ್ವಿ ಮೊದಲಾದಾರು ತತ್ತ್ವಗಳನ್ನೂ ಲಯಗೊಳಿಸುವುದು-ಎಂದರೆ- ಪಂಚಾಕ್ಷರಷಡಕ್ಷರರೂಪವಾಗಿ ಮಾಡಿಕೊಳ್ಳುವುದೇ ಕ್ರಮವಾಗಿ ಪಂಚಾಕ್ಷರೀವಿದ್ಯೆ ಷಡಕ್ಷರೀವಿದ್ಯೆಯೆನಿಸುವುದು.

ಅಂಗಮಾತ್ಮಾ ಶಿವೋ ಲಿಂಗಮಿಷ್ಟಮಾದೃತಮಾತ್ಮನಃ
ಸಮಾಧಿಃ ಕರಣಾನಾಂ ತತ್ಕರಪೀಠಮುದಾಹೃತಂ ೧೧೪

ಸಮಾಹಿತತ್ರಿಕರಣಕ್ರಿಯಾಯಾಂ ಯಾ ವ್ಯವಸ್ಥಿತಾ
ಸಾ ಸಾ ಸಮರ್ಚನಾ ನಿತ್ಯಂ ಸಮರ್ಪಣಮಪಿ ಸ್ವಯಂ ೧೧೫

ಅರ್ಚನಾರ್ಪಣಯೋಗೇಽಸ್ಮಿನ್ ಸುಖೈಕಘನಲಕ್ಷಣಾ
ಯಾ ವೃತ್ತಿರ್ವಿಮಲಾ ಭಾತಿ ಸೈವ ಶೈವೀ ಪ್ರಸನ್ನತಾ ೧೧೬

ಪ್ರಸನ್ನತಾವಕಾಶೋಽಯಮಾನಂದಃ ಪ್ರಾಣಿನಃ ಪರಃ
ಮಹತ್ಯೇಷ ಪದೇ ಸ್ವೀಯೋ ಸ್ವಯಮೇವ ಮಹೀಯತೇ ೧೧೭

---

ಸೂ. ೧೧೪. ಅಂಗನನ್ನು ಆತ್ಮನೆಂದೂ ಇಷ್ಟಲಿಂಗವನ್ನು ಶಿವನೆಂದೂ ಅಂಗೀಕರಿಸಲ್ಪಟ್ಟಿದೆ. ಮತ್ತು ಆತ್ಮನ ಅಂತಃಕರಣ ಬಹಿಃಕರಣಗಳ ಸಮಾಧಿ (ಏಕೀಕರಣ) ಯೇ ಅವನ ಕರಪೀಠವೆಂದು ಉದಾಹರಿಸಲ್ಪಟ್ಟಿದೆ.

ಸೂ. ೧೧೫. ಸಮಾಧಾನಯುಕ್ತವಾದ ಕಾಯವಾಙ್ಮನಗಳ ಕ್ರಿಯೆಯಲ್ಲಿ ಪೂಜಾಜಪಧ್ಯಾನಾದಿರೂಪವಾದ ಯಾವ ವ್ಯವಸ್ಥೆಯು ಏರ್ಪಟ್ಟಿರುವುದೋ ಅದೇ ನಿತ್ಯದ ಅರ್ಚನವೂ ಅರ್ಪಣವೂ ಆಗಿರುವುದು.

ಸೂ. ೧೧೬. ಈ ಅರ್ಚನಾರ್ಪಣಯೋಗದಲ್ಲಿ ಸುಖೈಕಘನಲಕ್ಷಣದಿಂದ ಕೂಡಿದ ಯಾವ ನಿರ್ಮಲವಾದ ಚಿತ್ತವೃತ್ತಿಯು ಪ್ರಕಾಶಿಸುವುದೋ ಅದೇ ಶಿವಪ್ರಸನ್ನತೆಯೆನಿಸುವುದು.

ಸೂ. ೧೧೭. ಈ ಶಿವಪ್ರಸನ್ನತೆಯ ಸಮಯದಲ್ಲಿ ಆತ್ಮನಿಗೆ ಜನಿಸುವ ಆನಂದವು ಶ್ರೇಷ್ಠವಾದುದು. ಆತ್ಮನು ಮಹತ್ತಾದ ಆನಂದಸ್ಥಾನದಲ್ಲಿದ್ದು ತಾನೂ ಮಹತ್ತು (ಪೂಜ್ಯ)ವೆನಿಸುವನು.

ಶಿಷ್ಯ :

ನಿರುಕ್ತಂ ಯುಕ್ತಿಯುಕ್ತಂ ಯದುಕ್ತಂ ವ್ಯಕ್ತಂ ತ್ವಯಾ ವಿಭೋ
ವಿಜ್ಞಾತವಾನಹಂ ತೇಷಾಮನುಬಂಧಂ ವದಸ್ವ ಮೇ ೧೧೮

ಗುರು :

ಧಾರಣಂ ಭೂತಿರುದ್ರಾಕ್ಷಾಣಾಂ ತಥಾಚಾರಲಿಂಗಕಂ
ಆಚಾರಲಿಂಗಸಂಬಂಧಿ ಗುರುಲಿಂಗಮಿತಿ ಸ್ಮೃತಂ ೧೧೯

ಗುರುಲಿಂಗೇನ ಯದ್ದೃಷ್ಟಂ ಶಿವಲಿಂಗಮಿತೀರಿತಂ
ಶಿವಲಿಂಗಮುಖಂ ಯತ್ತಚ್ಚರಲಿಂಗಮುದಾಹೃತಂ ೧೨೦

ಚರಲಿಂಗೋಪಲಬ್ಧಂ ಯತ್ತತ್ಪ್ರಸಾದಾಖ್ಯಲಿಂಗಕಂ
ಪ್ರಸಾದಗ್ರಾಹಕಂ ಸಾಕ್ಷಾನ್ಮಹಾಲಿಂಗಮಿಹೋಚ್ಯತೇ ೧೨೧

---

ವಿಚಾರ

ಷಟ್‌ಸ್ಥಲಕ್ಕನುಸರಿಸಿ ಮಾಡುವ ಆಚಾರಾದಿ ಷಡ್ಲಿಂಗಗಳ ಉಪಾಸನೆಗೆ ಸಂಬಂಧಿಸಿದ ಆಚಾರ, ಭೂತಿರುದ್ರಾಕ್ಷಧಾರಣ, ಮಂತ್ರ, ಇಷ್ಟಲಿಂಗದ ಕರಪೀಠ, ಅರ್ಚನ, ಅರ್ಪಣ, ಅರ್ಚನಾರ್ಪಣಯೋಗದಿಂದುಂಟಾಗುವ ಚಿತ್ತಪ್ರಸನ್ನತೆ, ಆ ಪ್ರಸನ್ನತೆಯಲ್ಲೊಡಮೂಡುವ ಆನಂದ - ಇವುಗಳ ಅರ್ಥವನ್ನು ಸೂತ್ರಕಾರನು ವಿಶಿಷ್ಟರೀತಿಯಿಂದ ಮಾಡಿರುವುದನ್ನು ಗಮನಿಸಬೇಕು.

ಶಿಷ್ಯ. ೧೧೮ ಪ್ರಭುವೆ, ನಿನ್ನಿಂದುಕ್ತವಾದ ಯುಕ್ತಿಯುಕ್ತವಾದ ಆಚಾರಾದಿ ಸ್ವರೂಪನಿರ್ವಚನವು ವ್ಯಕ್ತವಾದುದನ್ನು ನಾನು ತಿಳಿದುಕೊಂಡೆನು. ಇನ್ನು ಆಚಾರಾದಿ ಲಿಂಗಗಳಿಗಿರುವ ಪರಸ್ಪರಸಂಬಂಧವನ್ನು ಹೇಳು.

ಆಚಾರಾದಿ ಲಿಂಗಗಳ ಪರಸ್ಪರ ಸಂಬಂಧ

ಗುರು. ಸೂ. ೧೧೯. ೧೨೦. ೧೨೧. ಭೂತಿರುದ್ರಾಕ್ಷಧಾರಣಸ್ವರೂಪವಾದ ಆಚಾರಲಿಂಗದಿಂದ ಪ್ರಾಪ್ತವಾಗುವುದು ಗುರುಲಿಂಗವು (೧೧೯).

ಶಿಷ್ಯ ಃ

ಲಿಂಗಷಟ್‌ಸ್ಥಲಮಾಖ್ಯಾತಂ ಸ್ವಾನುಬಂಧಂ ತ್ವಯಾ ವಿಭೋ
ಅಂಗಷಟ್‌ಸ್ಥಲಮೇತೇಷಾಂ ಭಕ್ತಾದಿಕಮಿಹೋಚ್ಯತಾಂ ೧೨೨

ಗುರುಃ

ಭಕ್ತೋ ಹ್ಯಾತ್ಮವಿಭೇದತಃ ಪೃಥಗಸಾವಾತ್ಮಾ ಮಹೇಶಾಶ್ರಯಾತ್
ಮಾಹೇಶಃ ಸ್ವಧಿಯಾ ಪ್ರಸಾದತ ಉತಾಯಂ ಸ ಪ್ರಸಾದೀ ತತಃ
ಪ್ರಾಣೋ ಮಿತಃ ಪ್ರತಿಷ್ಠಿತಮತಿಃ ಸ್ಯಾತ್ಪ್ರಾಣಲಿಂಗೀ ಸ್ವತಃ
ಸ್ವಪ್ರಾಣಾರ್ಪಣಕೌಶಲೇನ ಶರಣಸ್ತ್ವೈಕ್ಯೋ ಹ್ಯಭೇದೇ ಪದೇ ೧೨೩

---

ಗುರುಲಿಂಗದಿಂದ ದೃಷ್ಟವಾಗುವದು ಶಿವಲಿಂಗ. ಶಿವಲಿಂಗದ ಮುಖವೇ ಜಂಗಮಲಿಂಗ (೧೨೦) ಜಂಗಮಲಿಂಗದಿಂದ ಪ್ರಾಪ್ತವಾಗುವದೇ ಪ್ರಸಾದಲಿಂಗ. ಪ್ರಸಾದಗ್ರಾಹಕವಾದುದೇ ಮಹಾಲಿಂಗ (೧೨೧). ಹೀಗೆ ಆಚಾರಾದಿಲಿಂಗಗಳ ಪರಸ್ಪರ ಸಂಬಂಧವಿರುವುದೆಂದು ಗ್ರಹಿಸಬೇಕು.

ಶಿಷ್ಯ ಸೂ. ೧೨೨. ವಿಭುವೆ, ಲಿಂಗಷಟ್‌ಸ್ಥಲಗಳ ಸ್ವಾನುಬಂಧವು ನಿನ್ನಿಂದ ಹೇಳಲ್ಪಟ್ಟುದು. ಇನ್ನು ಈ ಲಿಂಗಷಟ್‌ಸ್ಥಲಗಳಿಗೆ ಸಂಬಂಧಿಸಿದ ಭಕ್ತಾದಿಯಾದಂಗಷಟ್‌ಸ್ಥಲದ ಸ್ವರೂಪವನ್ನು ಹೇಳು.

### ಭಕ್ತಾದಿಸ್ಥಲಗಳ ಸ್ವರೂಪ

ಗುರು ಸೂ. ೧೨೩. ಇತರ ಭವಿಗಳಾದ ಜೀವಾತ್ಮರಿಗಿಂತಲೂ ಭಕ್ತಿಯಿಂದ ಭಿನ್ನನಾದವನು ಭಕ್ತನು. ಆ ಭಕ್ತನು ಶಿವನನ್ನೇ ಆಶ್ರಯಿಸಿಕೊಂಡಿದ್ದರೆ ಮಹೇಶ್ವರನೆನಿಸುವನು. ಮಹೇಶ್ವರನು ಸ್ವಬುದ್ಧಿಯಿಂದ ಪ್ರಸನ್ನತೆಯನ್ನು ಪಡೆದರೆ ಪ್ರಸಾದಿಯೆನಿಸುವನು. ಪ್ರಸಾದಿಯು ತನ್ನ ಲಿಂಗವೇ ಪ್ರಾಣಸ್ವರೂಪವೆಂಬ ಸ್ಥಿರಮತಿಯುಳ್ಳವನಾದರೆ ಪ್ರಾಣಲಿಂಗಿಯೆನಿಸುವನು. ಪ್ರಾಣಲಿಂಗಿಯು ಶಿವನಿಗಾಗಿ ತನ್ನ ಪ್ರಾಣಾರ್ಪಣ ಮಾಡುವ ಕುಶಲತೆಯಿಂದ ಶರಣನೆನಿಸುವನು. ಶರಣನು ತಾನು ಮತ್ತು ಲಿಂಗವು ಒಂದೇ ಎಂಬ ಅಭೇದಸ್ಥಿತಿಯನ್ನು ಪಡೆದರೆ ಐಕ್ಯನೆನಿಸುವನು.

ಭಕ್ತೋ ದೇಹಾದಿಹಾನಾದ್ಭವತಿ ತದಚಲಶ್ಚೇತ್ಸ ಮಾಹೇಶ್ವರೋऽಯಂ
ನೈಶ್ಚಲ್ಯಾಚ್ಚಿತ್ತಶುದ್ಧಿರ್ಯದಿ ಭವತಿ ಸ ಏಷ ಪ್ರಸಾದೀ ತತೋऽಸೌ
ಜೀವಾತ್ಮಾಭಾವಬುದ್ಧಿರ್ಭವತಿ ಯದಿ ಸ ಹಿ ಪ್ರಾಣಲಿಂಗೀ ಶಿವತ್ವಂ
ಸತ್ಯಂ ಚೇತ್ಸೋऽಯಮಾತ್ಮಾ ಶರಣ ಉಭಯಭಾವೋ ಸ ಚ
ಸ್ಯಾಚ್ಛಿವೈಕ್ಯಃ ೧೨೪

ಭಕ್ತಶ್ಚೇದಿಹ ಲೋಕಧರ್ಮರಹಿತೋ ಮಾಹೇಶ್ವರೋ ಯದ್ಯಪಿ
ತ್ಯಕ್ತಾನ್ಯಾಶ್ರಯಕಾಮ್ಯಚಾರವಿಷಯಃ ಪ್ರಾಯಃ ಪ್ರಸಾದೀ ತಥಾ
ವ್ಯಾಧಿಕ್ಲೇಶವಿವರ್ಜಿತೋ ಮರಣದೂರಪ್ರಾಣಲಿಂಗೀ ಪರೋ
ನ ಸ್ಯಾಚ್ಛರಣಃ ಪರಂ ಯದಿ ನ ಚ ಶ್ರೀಮಚ್ಛಿವೈಕ್ಯೋ ಭವೇತ್ ೧೨೫

---

ಸೂ ೧೨೪. ದೇಹೇಂದ್ರಿಯಾದಿಗಳಲ್ಲಿ ನಾನು ನನ್ನದೆಂಬ ಅಭಿಮಾನವನ್ನು ಬಿಟ್ಟವನು ಭಕ್ತನು. ಹೀಗೆ ಅಭಿಮಾನರಹಿತನಾಗಿ ಆತ್ಮನಿಶ್ಚಲತೆಯಿಂದಿದ್ದರೆ ಮಹೇಶ್ವರನು. ನಿಶ್ಚಲತೆಯಿಂದುಂಟಾದ ಚಿತ್ತಶುದ್ಧಿಯುಳ್ಳವನಾದರೆ ಪ್ರಸಾದಿಯು. ಚಿತ್ತಶುದ್ಧಿಯಿಂದ ತನ್ನಲ್ಲಿ ಜೀವಭಾವ ರಹಿತಬುದ್ಧಿಯುಂಟಾದರೆ ಪ್ರಾಣಲಿಂಗಿಯು. ಜೀವಭಾವರಹಿತಬುದ್ಧಿಯಲ್ಲಿ ಶಿವಭಾವವು ನೆಲೆಗೊಂಡರೆ ಶರಣನು. ಜೀವಶಿವರೆಂಬುಭಯ ಭಾವವು ಬಯಲಾದರೆ ಐಕ್ಯನು.

ಸೂ ೧೨೫. ಇಹದಲ್ಲಿ ಲೋಕಧರ್ಮವನ್ನು ಬಿಟ್ಟವನು ಭಕ್ತನು. ಅನ್ಯದೇವತಾಕವಾದ ಕಾಮ್ಯ ಕರ್ಮವನ್ನು ಬಿಟ್ಟವನು ಮಹೇಶ್ವರನು. ವ್ಯಾಧಿಕ್ಲೇಶರಹಿತನು ಪ್ರಸಾದಿಯು. ಮರಣದೂರನು ಪ್ರಾಣಲಿಂಗಿಯು. ತಾನು ಶಿವನಿಂದ ಪರನಲ್ಲವೆಂದು ತಿಳಿದವನೇ ಶರಣನು. ಸ್ವಪರಭೇದವಿಲ್ಲದ ಏಕತ್ವವುಳ್ಳವನೇ ಐಕ್ಯನು.

ಪೃಥ್ವ್ಯಂಗಂ ಚೇದ್ಭಯಂ ಪಾರ್ಥಿವವಿಃಹ ನ ಪಯೋಽಂಗಂ
ತದೀಯಂ ನ ಚಾಗ್ನಿ
ರ್ನಾಗ್ನೇಯಂ ವಾಯುರಂಗಂ ಯದಿ ನ ಭವತಿ ವಾಯವ್ಯಮಂಗಂ
ನಭಶ್ಚೇತ್
ನಾಕಾಶಾದ್ಭೀತಿರಾತ್ಮಾ ಯದಿ ಭಯಮಪರಂ ನಾತ್ಮ್ಯಮೇವಂ
ಷಡಂಗಂ
ಭಕ್ತಾದ್ವೈಕ್ಯಂ ತಮೇತೇಷ್ವಹರಹರನುತಿಷ್ಠ ತ್ವಮತ್ರೈವ ನಿಷ್ಠಃ ೧೨೬

---

ಸೂ ೧೨೬. ಭಕ್ತನು ಪೃಥ್ವಿಯೇ ಅಂಗವಾಗುಳ್ಳವನಾವ ಪಕ್ಷದಲ್ಲಿ ಅವನಿಗೆ ಇಹದಲ್ಲಿ ಪೃಥ್ವಿಸಂಬಂಧವಾದ ಭಯವಿಲ್ಲ. ಮಹೇಶ್ವರನಿಗೆ ಜಲಾಂಗವಾದಾಗ ಜಲಸಂಬಂಧದ ಭಯವಿಲ್ಲ. ಪ್ರಸಾದಿಗೆ ಅಗ್ನಿಯು ಅಂಗವಾದಾಗ ಅಗ್ನಿಸಂಬಂಧದ ಭಯವಿಲ್ಲ. ಪ್ರಾಣಲಿಂಗಿಗೆ ವಾಯು ಅಂಗವಾದಾಗ ವಾಯುವಿನ ಭೀತಿಯಿಲ್ಲ. ಶರಣನಿಗೆ ಆಕಾಶವಂಗ ವಾದಾಗ ಆಕಾಶಸಂಬಂಧ ಭೀತಿಯಿಲ್ಲ. ಐಕ್ಯನಿಗೆ ಆತ್ಮನೇ ಅಂಗವಾದಾಗ ಇತರಾತ್ಮರ ಭೀತಿಯಿಲ್ಲ. ಹೀಗೆ ಭಕ್ತಾದಿಯಾಗಿ ಐಕ್ಯಾಂತವಾದ ಷಡಂಗದ ಸ್ವರೂಪವಿರುವುದು. ನೀನು ನಿಷ್ಠೆಯಿಂದ ಅನುದಿನವೂ ಈ ಷಡಂಗಗಳಾಚರಣೆಯಲ್ಲಿರು.

ವಿಚಾರ

ಅಂಗಷಟ್‌ಸ್ಥಲಗಳ ಸ್ವರೂಪವು ವಚನವಾಙ್ಮಯದಲ್ಲಿಯೂ ಧಾರ್ಮಿಕ ಗ್ರಂಥಗಳಲ್ಲಿಯೂ ಇನ್ನೂ ಅನೇಕ ರೀತಿಯಿಂದ ವಿವರಿಸಲ್ಪಟ್ಟಿರುವು-ದುಂಟು. ಆದರೆ ಭಕ್ತಾದಿ ಷಡಂಗಗಳಿಗೆ ಕ್ರಮವಾಗಿ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸವೆಂಬ ಷಡ್ವಿಧ ಭಕ್ತಿಗಳೇ ಮುಖ್ಯ ಲಕ್ಷಣವೆಂಬುದನ್ನು ಅರಿಯಬೇಕು.

ಶಿಷ್ಯ :

ನಮಃ ಶಿವಾಯ ಸೋಮಾಯ ಷಟ್‌ಸ್ಥಲಬ್ರಹ್ಮಮೂರ್ತಯೇ
ಸಚ್ಚಿದಾನಂದರೂಪಾಯ ಸ್ವಾನುಭೂತಿಕಲಾತ್ಮನೇ ೧೨೭

ಶ್ರೀಮದ್ವಿಭೂತಿರುದ್ರಾಕ್ಷಧಾರಣಾರೂಪಿಣೇ ಸದಾ
ನಮೋಽಸ್ತ್ವಾಚಾರಲಿಂಗಾಯ ಭಕ್ತ್ಯಾ ಭಕ್ತಸ್ಥಲಾಂಗಿನೇ ೧೨೮

ಧೃತಶ್ರೀಮತ್ಸದಾಚಾರಮೂರ್ತಯೇ ಸ್ವಾತ್ಮನಿಷ್ಠಯಾ
ಮಾಹೇಶ್ವರಾಂಗಿನೇ ಸಾಕ್ಷಾದ್ಗುರುಲಿಂಗಾಯ ತೇ ನಮಃ ೧೨೯

ಗುರುಪ್ರಸನ್ನತಾದ್ವಾರದೃಪ್ತಮಂತ್ರಾರ್ಥರೂಪಿಣೇ
ಸಾವಧಾನಪ್ರಸಾದ್ಯಂಗಿ ಶಿವಲಿಂಗಾಯ ತೇ ನಮಃ ೧೩೦

ಶಿವಾರ್ಚನಾರ್ಪಣಾಕಾರಕ್ರಿಯಾನುಭವರೂಪಿಣೇ
ನಮಸ್ತೇ ಚರಲಿಂಗಾಯ ಪ್ರಾಣಲಿಂಗಿಸ್ಥಲಾಂಗಿನೇ ೧೩೧

---

## ಲಿಂಗಾಂಗರೂಪವಾದ ಷಟ್‌ಸ್ಥಲದ ಸ್ತೋತ್ರ

ಶಿಷ್ಯ ಸೂ. ೧೨೭. ಸಚ್ಚಿದಾನಂದ ಸ್ವರೂಪನೂ, ಉಮಾಸಹಿತನಾದ ಶಿವನೂ, ಸ್ವಾನುಭಾವ ಕಲೆಯುಳ್ಳವನೂ ಆದ ಷಟ್‌ಸ್ಥಲಬ್ರಹ್ಮಮೂರ್ತಿಗೆ ನಮಸ್ಕಾರ.

ಸೂ ೧೨೮. ಭಕ್ತಿಯಿಂದ ಭಕ್ತಸ್ಥಲಾಂಗನಾದ ಮತ್ತು ಯಾವಾಗಲೂ ವಿಭೂತಿರುದ್ರಾಕ್ಷಧಾರಣರೂಪಿಯಾದ ಆಚಾರಲಿಂಗಕ್ಕೆ ನಮಸ್ಕಾರ.

ಸೂ ೧೨೯ ರಿಂದ ೧೪೬. ಸ್ವಾತ್ಮ ನಿಷ್ಠೆಯಿಂದ ಧರಿಸಿದ ಸದಾಚಾರದ ಮೂರ್ತಿಯೇ ಆಗಿ, ಮಹೇಶ್ವರಾಂಗದಲ್ಲಿರುವ ಸಾಕ್ಷಾದ್ಗುರುಲಿಂಗವೇ, ನಿನಗೆ ನಮಸ್ಕಾರ (೧೨೯). ಗುರುಪ್ರಸನ್ನತೆಯಿಂದ ಪ್ರಾಪ್ತವಾದ ಮಂತ್ರದ ಅರ್ಥಸ್ವರೂಪನಾಗಿ ಸಾವಧಾನದಿಂದ ಕೂಡಿದ ಪ್ರಸಾದ್ಯಂಗ-ದಲ್ಲಿರುವ ಶಿವಲಿಂಗವೇ, ನಿನಗೆ ನಮಸ್ಕಾರ (೧೩೦). ಶಿವಾರ್ಚನಾರ್ಪ-ಣಾತ್ಮಕವಾದ ಕ್ರಿಯೆಯಿಂದುಂಟಾದ ಅನುಭವರೂಪನಾಗಿ, ಪ್ರಾಣಲಿಂಗಿ-

ಚರಮಾಕಾಶಭೂತಾಯ ಕ್ರಿಯಾಯಾಃ ಫಲರೂಪಿಣೇ
ಪ್ರಸಾದಾನಂದಲಿಂಗಾಯ ನಮಸ್ತೇ ಶರಣಾಂಗಿನೇ ೧೩೨

ಪ್ರಸಾದಭೋಗಸಂತೃಪ್ತಿ ಸಾಮರಸ್ಯಸ್ವರೂಪಿಣೇ
ಐಕ್ಯಸ್ಥಲಾಂಗಿನೇ ಸಾಕ್ಷಾನ್ಮಹಾಲಿಂಗಾಯ ತೇ ನಮಃ ೧೩೩

ನಮಸ್ತ್ವಾಚಾರಲಿಂಗಾಯ ಸದ್ಯೋಜಾತಾಯ ಭೂಮಯೇ
ವಿಭೂತ್ಯೇಕಪ್ರಕಾಶಾಯ ನಕಾರಮನುಮೂರ್ತಯೇ ೧೩೪

ನಮಃ ಸದ್ಗುರುಲಿಂಗಾಯ ವಾಮದೇವಾಯ ಚಾಂಭಸೇ
ಭಸಿತಾಪ್ತಪ್ರಕಾಶಾಯ ಮಕಾರಮನು ಮೂರ್ತಯೇ ೧೩೫

ನಮಸ್ತೇ ಶಿವಲಿಂಗಾಯಾಘೋರರೂಪಾಯ ವಹ್ನಯೇ
ಭಸ್ಮದಿಗ್ಧಪ್ರಕಾಶಾಯ ಶಿಕಾರಮನ ಮೂರ್ತಯೇ ೧೩೬

ನಮಸ್ತೇ ಚರಲಿಂಗಾಯ ತತ್ಪುರುಷಾಯ ಚ ವಾಯವೇ
ಕ್ಷಾರಾಭ್ಯಕ್ತಪ್ರಕಾಶಾಯ ವಾಕಾರಮನುಮೂರ್ತಯೇ ೧೩೭

ನಮಃ ಪ್ರಸಾದಲಿಂಗಾಯ ಈಶಾನ್ಯಾಕಾಶರೂಪಿಣೇ
ರಕ್ಷಾಲಿಪ್ತಪ್ರಕಾಶಾಯ ಯಕಾರಮನುಮೂರ್ತಯೇ ೧೩೮

ಮಹಾಲಿಂಗಾಯ ತೇ ಪಂಚಬ್ರಹ್ಮಣೇ ನಮ ಆತ್ಮನೇ
ಪರಭೂತಿಪ್ರಕಾಶಾಯ ಓಂಕಾರಮನುಮೂರ್ತಯೇ ೧೩೯

---

ಸ್ಥಲದಲ್ಲಿರುವ ಚರಲಿಂಗಮೂರ್ತಿಯೇ ನಿನಗೆ ನಮಸ್ಕಾರ. (೧೩೧). ಅರ್ಚನಾರ್ಪಣಕ್ರಿಯೆಯ ಫಲರೂಪವಾಗಿ, ಪಂಚಭೂತಗಳಲ್ಲಿ ಕೊನೆಯದಾದ ಆಕಾಶವನ್ನಾಶ್ರಯಿಸಿದ ಶರಣಸ್ಥಲಾಂಗದಲ್ಲಿರುವ ಪ್ರಸಾದಾನಂದಲಿಂಗವೇ, ನಿನಗೆ ನಮಸ್ಕಾರ (೧೩೨). ಪ್ರಸಾದಭೋಗತೃಪ್ತಿಯ ಸಾಮರಸ್ಯಸ್ವರೂಪವಾಗಿ ಐಕ್ಯಾಂಗದಲ್ಲಿರುವ ಮಹಾಲಿಂಗವೇ, ನಿನಗೆ ನಮಸ್ಕಾರ (೧೩೩). ಸದ್ಯೋಜಾತಮೂರ್ತಿಯೂ, ಭೂತತ್ವಸ್ವರೂಪವೂ, ನಕಾರಮಂತ್ರಮೂರ್ತಿಯೂ ಆಗಿ, ವಿಭೂತಿಯ ಮುಖ್ಯ ಪ್ರಕಾಶವುಳ್ಳ ಆಚಾರಲಿಂಗಕ್ಕೆ ನಮಸ್ಕಾರ (೧೩೪). ವಾಮದೇವಮೂರ್ತಿಯೂ,

ನಮೋಽಸ್ತ್ವಾಚಾರಲಿಂಗಾಯ ನಮೋಽಸ್ತ್ವಾಚಾರಲಿಂಗಿನೇ
ನಮಸ್ತೇ ಗುರುಲಿಂಗಾಯ ನಮಸ್ತೇ ಗುರುಲಿಂಗಿನೇ ೧೪೦

ನಮಸ್ತೇ ಶಿವಲಿಂಗಾಯ ನಮಸ್ತೇ ಶಿವಲಿಂಗಿನೇ
ನಮಸ್ತೇ ಚರಲಿಂಗಾಯ ನಮಸ್ತೇ ಚರಲಿಂಗಿನೇ ೧೪೧

ನಮಃ ಪ್ರಸಾದಲಿಂಗಾಯ ನಮಃ ಪ್ರಾಸಾದಲಿಂಗಿನೇ
ನಮೋ ಮಹಾತ್ಮಲಿಂಗಾಯ ನಮೋ ಮಾಹಾತ್ಮ್ಯಲಿಂಗಿನೇ ೧೪೨

ನಮೋ ಭಕ್ತಾಂಗರೂಪಾಯ ನಮೋ ಭಕ್ತಾಂಗರೂಪಿಣೇ
ನಮೋ ಮಾಹೇಶ್ವರಾಂಗಾಯ ನಮೋ ಮಾಹೇಶ್ವರಾಂಗಿನೇ ೧೪೩

---

ಜಲತತ್ತ್ವಸ್ವರೂಪವೂ, ಮಕಾರಮಂತ್ರಮೂರ್ತಿಯೂ ಆಗಿ, ಭಸಿತ-ದಿಂದುಂಟಾದ ಪ್ರಕಾಶವುಳ್ಳ ಸದ್ಗುರುಲಿಂಗಕ್ಕೆ ನಮಸ್ಕಾರ (೧೩೫) ಅಘೋರಮೂರ್ತಿಯೂ, ವಹ್ನಿತತ್ತ್ವಸ್ವರೂಪವೂ, ಶಿಕಾರಮಂತ್ರಮೂರ್ತಿ-ಯೂ ಆಗಿ, ಭಸ್ಮ ಪ್ರಾಪ್ತ ಪ್ರಕಾಶವುಳ್ಳ ಶಿವಲಿಂಗಕ್ಕೆ ನಮಸ್ಕಾರ (೧೩೬). ತತ್ಪುರುಷಮೂರ್ತಿಯೂ, ವಾಯುತತ್ತ್ವಸ್ವರೂಪವೂ, ವಾಕಾರಮಂತ್ರ-ಮೂರ್ತಿಯೂ ಆಗಿ, ಕ್ಷಾರವೆಂಬ ಭಸ್ಮದಿಂದುಂಟಾದ ಪ್ರಕಾಶವುಳ್ಳ ಜಂಗಮಲಿಂಗಕ್ಕೆ ನಮಸ್ಕಾರ (೧೩೭). ಈಶಾನ್ಯಮೂರ್ತಿಯೂ, ಆಕಾಶತತ್ತ್ವಸ್ವರೂಪವೂ ಯಕಾರಮಂತ್ರಮೂರ್ತಿಯೂ ಆಗಿ, ರಕ್ಷೆಯೆಂಬ ಭಸ್ಮದಿಂದುಂಟಾದ ಪ್ರಕಾಶವುಳ್ಳ ಪ್ರಸಾದಲಿಂಗಕ್ಕೆ ನಮಸ್ಕಾರ (೧೩೮). ಪಂಚಬ್ರಹ್ಮಮೂರ್ತಿಯೂ, ಆತ್ಮತತ್ತ್ವಸ್ವರೂಪವೂ, ಓಂಕಾರಮಂತ್ರ-ಮೂರ್ತಿಯೂ ಆಗಿ, ಪರಭೂತಿ ಪ್ರಕಾಶವುಳ್ಳ ಮಹಾಲಿಂಗವೇ ನಿನಗೆ ನಮಸ್ಕಾರ (೧೩೯). ಆಚಾರಲಿಂಗಕ್ಕೆ ಮತ್ತು ಆಚಾರಲಿಂಗವುಳ್ಳ ಭಕ್ತನಿಗೆ ನಮಸ್ಕಾರ. ಗುರುಲಿಂಗಕ್ಕೆ ಮತ್ತು ಗುರುಲಿಂಗವುಳ್ಳ ಮಹೇಶ್ವರನಿಗೆ ನಮಸ್ಕಾರ(೧೪೦). ಶಿವಲಿಂಗವೆ ಮತ್ತು ಶಿವಲಿಂಗವುಳ್ಳ ಪ್ರಸಾದಿಯೆ ನಮಸ್ಕಾರ. ಜಂಗಮಲಿಂಗವೆ ಮತ್ತು ಜಂಗಮಲಿಂಗವುಳ್ಳ ಪ್ರಾಣಲಿಂಗಿಯೆ ನಮಸ್ಕಾರ (೧೪೧). ಪ್ರಸಾದಲಿಂಗವೆ ಮತ್ತು ಪ್ರಸಾದಲಿಂಗವುಳ್ಳ ಶರಣನೇ ನಮಸ್ಕಾರ. ಮಹಾಲಿಂಗವೆ ಮತ್ತು ಮಹಾಲಿಂಗವುಳ್ಳ ಐಕ್ಯನೆ ನಮಸ್ಕಾರ (೧೪೨). ಭಕ್ತಾಂಗನೆ ಮತ್ತು ಭಕ್ತಾಂಗದಲ್ಲಿರುವ ಆಚಾರಲಿಂಗವೆ ನಮಸ್ಕಾರ. ಮಹೇಶ್ವರಾಂಗನೆ, ಮತ್ತು ಮಹೇಶ್ವರಾಂಗ

ಪ್ರಸಾದ್ಯಂಗಸ್ವರೂಪಾಯ ಪ್ರಸಾದ್ಯಂಗಸ್ವರೂಪಿಣೇ
ಪ್ರಾಣಲಿಂಗ್ಯಂಗರೂಪಾಯ ಪ್ರಾಣಲಿಂಗ್ಯಂಗರೂಪಿಣೇ ೧೪೪

ನಮಸ್ತೇ ಶರಣಾಂಗಾಯ ನಮಸ್ತೇ ಶರಣಾಂಗಿನೇ
ನಮ ಐಕ್ಯಾಂಗರೂಪಾಯ ನಮ ಐಕ್ಯಾಂಗರೂಪಿಣೇ ೧೪೫

ನಮಃ ಶಿವಾಯ ಲಿಂಗಾಯ ಲಿಂಗಾಂಗಪದರೂಪಿಣೇ
ಜ್ಯೋತಿಃಕರ್ಪೂರ ಸಂಯೋಗಪರನಿರ್ವಾಣಹೇತವೇ ೧೪೬

ಗುರು :

ಆಚಾರಲಿಂಗಾದಿಭಿರೇವ ಷಡ್ಭಿಃ ಷಡಂಗಯುಕ್ತೈರ್ವಿಗತಾಂಗಸಂಗೈಃ
ತೈರ್ಭುಕ್ತಮನ್ನಾದಿಸಮಸ್ತವಸ್ತು ಪ್ರಸಾದರೂಪಂ ಸ್ವತ ಏವ ಸಿದ್ಧಂ ೧೪೭

---

ದಲ್ಲಿರುವ ಗುರುಲಿಂಗವೆ ನಮಸ್ಕಾರ (೧೪೩). ಪ್ರಸಾದಾಂಗನೆ, ಮತ್ತು ಪ್ರಸಾದಾಂಗದಲ್ಲಿರುವ ಶಿವಲಿಂಗವೆ ನಮಸ್ಕಾರ. ಪ್ರಾಣಲಿಂಗಿಯೆ ಮತ್ತು ಪ್ರಾಣಲಿಂಗಿಯಲ್ಲಿರುವ ಜಂಗಮಲಿಂಗವೆ ನಮಸ್ಕಾರ (೧೪೪). ಶರಣನೆ, ಮತ್ತು ಶರಣನಲ್ಲಿರುವ ಪ್ರಸಾದಲಿಂಗವೆ, ನಮಸ್ಕಾರ. ಐಕ್ಯನೆ ಮತ್ತು ಐಕ್ಯನಲ್ಲಿರುವ ಮಹಾಲಿಂಗವೆ ನಮಸ್ಕಾರ (೧೪೫),

ಉರಿಯುಂಡ ಕಪ್ಪುರದಂತಿರುವ ಲಿಂಗಾಂಗಸಮರಸವೆಂಬ ಮುಕ್ತಿಗೆ ಕಾರಣವಾಗಿ, ಲಿಂಗಾಂಗಸ್ವರೂಪನಾಗಿರುವ ಶಿವಲಿಂಗಕ್ಕೆ ನಮಸ್ಕಾರ (೧೪೬).

ಗುರು ಸೂ ೧೪೭. ಶಿಷ್ಯನೆ, ನೀನು ಸ್ತೋತ್ರಮಾಡಿದ ದೇಹೇಂದ್ರಿಯಾದಿ ಸಂಗರಹಿತವಾದ ಭಕ್ತಾದಿ ಷಡಂಗಯುಕ್ತವಾದ ಆಚಾರಾದಿ ಷಡ್ಲಿಂಗಗಳಿಗೆ ಅರ್ಪಿತವಾದ ಅನ್ನಾದಿ ಸಮಸ್ತವಸ್ತುವು ಪ್ರಸಾದರೂಪವಾಗುವುದೆಂಬದು ಸ್ವತಃಸಿದ್ಧವಾಗಿರುವುದು.

ಅಥ ಪ್ರಸಾದ ಉಚ್ಛಿಷ್ಟಮಿತಿ ಭ್ರಾಂತಿಮತೀ ಮತಿಃ
ಲೌಕಿಕಾನಾಮಭಕ್ತಾನಾಂ ಜಾಯತೇ ಸುದೃಢಾ ಭುವಿ ೧೪೮

ಮುಸಲೋಲೂಖಲಚುಲ್ಲೀಘಟೀಕಪ್ಪತಿಲಯಂತ್ರ
ಮುಖಸಮುದ್ಭೂತಂ
ನ ಕಿಮಪಿ ದೂಷ್ಯತಿ ಲೋಕೇ ದೂಷ್ಯತಿ ಗುರುಲಿಂಗಜಂಗಮ-
ಮುಖೋತ್ಥಂ ೧೪೯

ಪ್ರಸಾದಭೋಗಸಂಪ್ರಾಪ್ತಾವಂತರಾಯೋ ಮಹಾನಯಂ
ಭವೇತ್ಪ್ರಸಾದಭೋಕ್ತೄಣಾಂ ಸೂತಕದ್ವಯಸಂಗಮಃ ೧೫೦

ಓದನಸೂತಕಮಾದಾವಂತೇ ಚೋಚ್ಛಿಷ್ಟಸೂತಕದ್ವಿತಯಂ
ಹಿತ್ವಾ ಶಿವಪ್ರಸಾದಂ ಭುನಕ್ತಿ ಯಃ ಸಃ ಪ್ರಸಾದವಾನ್ ಭವತಿ ೧೫೧

---

ಸೂ. ೧೪೮. ಹೀಗೆ ಸ್ವತಃ ಸಿದ್ಧವಾದ ಪ್ರಸಾದದಲ್ಲಿ ಉಚ್ಛಿಷ್ಟವೆಂಬ ಭ್ರಾಂತಿಮತಿಯು ಭಕ್ತರಲ್ಲದ ಲೌಕಿಕರಿಗೆ ದೃಢವಾಗಿಯೇ ಭುವಿಯಲ್ಲಿ ಉಂಟಾಗುವುದು.

ಸೂ ೧೪೯. ಲೋಕದಲ್ಲಿ ಒನಕೆ, ಒರಳು, ಒಲೆ, ಗಡಿಗೆ, ಕಬ್ಬು, ಎಣ್ಣೆಯ ಗಾನ ಮೊದಲಾದವುಗಳಿಂದ ಸಿದ್ಧವಾಗುವ ಪದಾರ್ಥವು ಸ್ವಲ್ಪಾ-ದರೂ ದೋಷಯುಕ್ತವಾಗಿರುವುದಿಲ್ಲ. ಗುರುಲಿಂಗಜಂಗಮಮುಖದಿಂದ ಸಿದ್ಧವಾಗುವ ಪ್ರಸಾದವು ದೋಷಯುಕ್ತ (ಉಚ್ಛಿಷ್ಟ) ವಾಗುವುದೆ? ಅದು ಹೇಗೆ?

ಸೂ. ೧೫೦. ಪ್ರಸಾದಭೋಗಿಗಳಿಗೆ ಪ್ರಸಾದಭೋಗಪ್ರಾಪ್ತಿಯಲ್ಲಿ ಸೂತಕದ್ವಯದಿಂದ ಕೂಡಿದ ದೊಡ್ಡ ವಿಘ್ನವೊಂದುಂಟಾಗುವುದು.

ಸೂ. ೧೫೧. ಭೋಜನಾದಿಯಲ್ಲಿ ಅನ್ನವೆಂಬ, ಭೋಜನಾಂತದಲ್ಲಿ ಉಚ್ಛಿಷ್ಟವೆಂಬ ಸೂತಕದ್ವಯವೇ ದೊಡ್ಡ ವಿಘ್ನವು. ಯಾವನು ಈ ವಿಘ್ನವನ್ನು ಕಳೆದು ಶಿವಪ್ರಸಾದವನ್ನು ಭೋಗಿಸುವನೋ; ಅವನು ಪ್ರಸಾದಿಯಾಗುವನು.

ಸೂತಕಂ ಪಾತಕಂ ಪ್ರೋಕ್ತಂ ಪಾತಕಂ ಕಿಲ್ಬಿಷಂ ಮಹತ್
ತಸ್ಮಾತ್ ಸೂತಕಮಾದ್ಯಂತಂ ಹಿತ್ವಾ ಭೋಗಂ ಸಮಾಚರೇತ್ ೧೫೩

ಉಚ್ಛಿಷ್ಟಂ ಚೇತ್ಪ್ರಸಾದೋ ನ ಪ್ರಸಾದಶ್ಚೇದ್ವಿಚಾರತಃ
ನ ಚಾನ್ಯಂ ಭವತೀತ್ಯೇವಂ ಜ್ಞಾತ್ವಾ ಭೋಗಂ ಸಮಾಚರೇತ್ ೧೫೪

ಅನ್ನಮೇವ ಪ್ರಸಾದಃ ಸ್ಯಾತ್ಪ್ರಸಾದಃ ಸೋಪಭೋಗತಃ
ಉಚ್ಛಿಷ್ಟಂ ಭವತೀತ್ಯೇತನ್ನ ಶ್ರೋತವ್ಯಮಸದ್ವಚಃ ೧೫೫

ಅನ್ನೋಚ್ಛಿಷ್ಟಪ್ರಸಾದಾನಾಂ ವಿವೇಕರಹಿತಕ್ರಿಯಾ
ಸಾ ತು ತ್ರಯಾಣಾಮೇತೇಷಾಂ ಭವತ್ಯಂಧಪರಂಪರಾ ೧೫೬

---

ಸೂ. ೧೫೩. ಸೂತಕಭಾವನೆಯೇ ಪಾಪವು. ಪಾಪವೇ ಮಹಾ ನರಕವು (ದುಃಖವು). ಆದುದರಿಂದ ಭೋಜನಾದ್ಯಂತಗಳಲ್ಲಿ ಉಂಟಾಗುವ ಸೂತಕಭಾವನೆಯನ್ನು ಕಳೆದು ಪ್ರಸಾದಭೋಗವನ್ನಾಚರಿಸಬೇಕು.

ಸೂ. ೧೫೪. ಉಚ್ಛಿಷ್ಟವೆನಿಸಿದರೆ ಪ್ರಸಾದವಾಗುವುದಿಲ್ಲ. ವಿಚಾರ ಮಾಡಿದರೆ ಪ್ರಸಾದದಲ್ಲಿ ಉಚ್ಛಿಷ್ಟಾದಿಯಾದ ಅನ್ಯಭಾವನೆಯಿಲ್ಲವೆಂಬುದನ್ನು ತಿಳಿದು ಪ್ರಸಾದವನ್ನು ಭೋಗಿಸಬೇಕು.

ಸೂ. ೧೫೫. ಅನ್ನವೇ ಪ್ರಸಾದವೆನಿಸುವುದು. ಅದನ್ನು ಭೋಗಿಸಿದ ಮೇಲೆ ಉಚ್ಛಿಷ್ಟವಾಗುವುದೆಂಬ ದುಷ್ಟವಾಕ್ಯವನ್ನು ಕೇಳತಕ್ಕದ್ದಲ್ಲ.

ಸೂ. ೧೫೬. ಮೊದಲು ಅನ್ನವು, ಆಮೇಲೆ ಪ್ರಸಾದವು, ಕೊನೆಗೆ ಉಚ್ಛಿಷ್ಟವು – ಎಂದಾಚರಿಸುವ ಕ್ರಿಯೆಯು ವಿವೇಕರಹಿತವಾದುದು. ಈ ವಿಧವಾದ ತ್ರಿವಿಧಭಾವನೆಯ ಕ್ರಿಯೆಯು ಅಂಧಪರಂಪರೆಯಾಗಿರುವುದು.

ಶಿಷ್ಯಃ

ಪ್ರಸಾದಭೋಗೋ ವಿದಿತೋ ಮಯಾ ತೇ ಪ್ರಸಾದತಃ
ಶ್ರೀಗುರುಲಿಂಗಮೂರ್ತೇ
ಪ್ರಸಾದರೂಪಾಧಿಗಮಾಯ ಭೂಯಃ ಪ್ರಸಾದಮಾಹಾತ್ಮ್ಯ-
ಮುದೀರಯಸ್ವ ೧೫೬

ಗುರುಃ

ಮಹತ್ತ್ವಂ ತೇ ಪ್ರಸಾದಸ್ಯ ಪ್ರವಕ್ಷ್ಯಾಮಿ ಸಮಾಸತಃ
ಪ್ರಸಾದಾವಾಪ್ತಯೇ ವತ್ಸ ಸಮಾಹಿತಮನಾಃ ಶ್ರುಣು ೧೫೭

ಪ್ರಸಾದೋಽಯಮನಾದ್ಯಂತೋಽವಿಕಲ್ಪೋಽಖಂಡಸಂಸ್ಥಿತಃ
ವಿಶುದ್ಧಃ ಶೇಷ ಇತ್ಯೇಷಾ ಪ್ರಸಾದಸ್ಯ ಮಹತ್ತ್ವತಾ ೧೫೮

---

ಶಿಷ್ಯ. ಸೂ. ೧೫೬. ಶ್ರೀಗುರುಲಿಂಗಮೂರ್ತಿಯೆ, ನಿನ್ನ ಅನುಗ್ರಹದಿಂದ್ದ ಪ್ರಸಾದಭೋಗವಿಷಯವು ವಿಧಿತವಾದುದು. ಇನ್ನು ಪ್ರಸಾದರೂಪ ಪ್ರಾಪ್ತಿಗಾಗಿ ಪ್ರಸಾದಮಾಹಾತ್ಮ್ಯವನ್ನು ವಿಸ್ತಾರವಾಗಿ ವಿವರಿಸು.

ಗುರು ಸೂ ೧೫೭. ವತ್ಸನೆ, ಪ್ರಸಾದರೂಪಪ್ರಾಪ್ತಿಗಾಗಿ ಸಂಗ್ರಹದಿಂದ ಪ್ರಸಾದ ಮಹತ್ವವನ್ನು ಹೇಳುವೆನು, ಸಮಾಧಾನಯುಕ್ತ ಮನಸ್ಸಿನಿಂದ ಕೇಳು.

### ಪ್ರಸಾದಾಷ್ಟಕವು

ಸೂ. ೧೫೮. ಪ್ರಸಾದವು, ಆದ್ಯಂತರಹಿತವೂ, ವಿಕಲ್ಪರಹಿತವೂ, ಅಖಂಡವೂ, ವಿಶುದ್ಧವೂ, ಶೇಷವೂ ಆಗಿರುವುದು. ಇದೇ ಪ್ರಸಾದದ ಮಹತ್ವವು.

ಆದ್ಯನ್ನಮಂತಮುಚ್ಛಿಷ್ಟಮೇತಾಭ್ಯಾಂ ರಹಿತತ್ವತಃ
ಪ್ರಸಾದೋಽಯಮನಾದ್ಯಂತಮಿತ್ಯಸ್ಯ ಮಹಿಮಾ ಖಲು ೧೫೯

ವಿಕಲ್ಪರೂಪಮನ್ನಾದಿ ಕಲ್ಪಿತಂ ತದಭಾವತಃ
ಅವಿಕಲ್ಪಪ್ರಸಾದೋಽಯಮಿತ್ಯಸ್ಯ ಮಹಿಮಾ ಖಲು ೧೬೦

ಖಂಡಃ ಸೂತಕಭಾವೋ ಯಸ್ತಸ್ಯೈವಾನುಪಪತ್ತಿತಃ
ಅಖಂಡಃಸ್ಯಾತ್ಪ್ರಸಾದೋಽಯಮಿತ್ಯಸ್ಯ ಮಹಿಮಾ ಖಲು ೧೬೧

ಉಚ್ಛಿಷ್ಟತ್ವಮಶುದ್ಧಿರ್ಯಾ ತಯಾ ವಿರಹಿತತ್ವತಃ
ವಿಶುದ್ಧಃ ಸ್ವಯಮೇವಾಯಮಿತ್ಯಸ್ಯ ಮಹಿಮಾ ಖಲು ೧೬೨

ಓದನೋಚ್ಛಿಷ್ಟಯೋರ್ನಾಶೇ ಶೇಷಿತತ್ವಾತ್ ಸ್ವಭಾವತಃ
ಪ್ರಸಾದಶೇಷ ಏವ ಸ್ಯಾದಿತ್ಯಸ್ಯ ಮಹಿಮಾ ಖಲು ೧೬೩

---

ಸೂ. ೧೫೯. ಆದಿಯಲ್ಲಿ ಅನ್ನವೆಂಬ, ಅಂತದಲ್ಲಿ ಉಚ್ಛಿಷ್ಟವೆಂಬ ಭೇದವಿಲ್ಲದಿರುವುದರಿಂದ ಪ್ರಸಾದವು ಅನಾದ್ಯಂತವೆನಿಸಿರುವುದು. ಇದು ನಿಶ್ಚಯವಾಗಿ ಅದರ ಮಹತ್ತ್ವವು.

ಸೂ. ೧೬೦. ಅನ್ನಾದಿಕಲ್ಪನೆಯು ವಿಕಲ್ಪರೂಪವಾದುದು. ಪ್ರಸಾದದಲ್ಲಿ ವಿಕಲ್ಪವಿಲ್ಲ. ಅದುದರಿಂದ ಪ್ರಸಾದವು ಅವಿಕಲ್ಪವೆನಿಸಿರುವುದು. ಇದು ಅದರ ಮಹತ್ತ್ವವು.

ಸೂ. ೧೬೧. ಸೂತಕಭಾವವು ಖಂಡವೆನಿಸುವುದು. ಪ್ರಸಾದದಲ್ಲಿ ಸೂತಕಭಾವವಿಲ್ಲದಿರುವುದರಿಂದ ಅಖಂಡವೆನಿಸುವುದು. ಇದು ನಿಶ್ಚಯವಾಗಿ ಅದರ ಮಹತ್ತ್ವವು.

ಸೂ. ೧೬೨. ಉಚ್ಛಿಷ್ಟತ್ವವು ಅಶುದ್ಧಿಯೆನಿಸುವುದು. ಅಶುದ್ಧಿರಹಿತವಾಗಿರುವುದರಿಂದ ಪ್ರಸಾದವು ವಿಶುದ್ಧವಾಗಿರುವುದು. ಇದೇ ಅದರ ಮಹತ್ತ್ವವು.

ಸೂ. ೧೬೩. ಅನ್ನ ಮತ್ತು ಉಚ್ಛಿಷ್ಟವೆಂಬ ಭಾವನೆಯು ಹೋಗಲಾಗಿ ಸ್ವಾಭಾವಿಕವಾಗಿ ಶೇಷವಾಗುವುದೇ ಪ್ರಸಾದಶೇಷವೆನಿಸುವುದು. ಇದು ಪ್ರಸಾದದ ಮಹತ್ವವು.

ಆತ್ಮಭುಕ್ತಂ ನ ಚೋಚ್ಛಿಷ್ಟಂ ಭಾಜನಸ್ಥಂ ನ ಚಾರ್ಪಿತಂ
ನ ಭಾಂಡಸಂಸ್ಥಿತಂ ಚಾನ್ನಮಿತ್ಯಸ್ಯ ಮಹಿಮಾ ಖಲು ೧೬೪

ಭಾಂಡೇ ಚ ಭಾಜನೇ ಚೈವ ಭೋಜನೇ ಚ ನಿರಂತರಂ
ಪ್ರಸಾದೋಽಯಮನುಸ್ಯೂತಮಿತ್ಯಸ್ಯ ಮಹಿಮಾ ಖಲು ೧೬೫

ಭಕ್ತ್ಯಾ ಪರಮಯಾ ಸ್ವೇಚ್ಛಾಕ್ರಿಯಯಾ ಸೋಪಚಾರಯಾ
ಪದಾರ್ಥಭಾವ ಇತ್ಯೇಷ ಇತ್ಯಸ್ಯ ಮಹಿಮಾ ಖಲು ೧೬೬

ಪ್ರಸಾಷ್ಟಕಮೇತದ್ಯಃ ಪ್ರಸಾದಪರಯಾ ಧಿಯಾ
ಪಠತ್ಯನುದಿನಂ ಸಃ ಸ್ಯಾತ್ಪ್ರಸಾದಜ್ಞಾನವಾನ್ ಪುಮಾನ್ ೧೬೭

---

ಸೂ. ೧೬೪. ಪ್ರಸಾದವು ಭಾಂಡದಲ್ಲಿರುವಾಗ ಅನ್ನವಾಗುವುದಿಲ್ಲ. ಭಾಜನದಲ್ಲಿರುವಾಗ ಮಾತ್ರ ಅರ್ಪಿತವೆನಿಸುವದಿಲ್ಲ. ಆತ್ಮಭುಕ್ತವಾದಾಗ ಉಚ್ಛಿಷ್ಟವೆನಿಸುವುದಿಲ್ಲ. ಇದೇ ಪ್ರಸಾದದ ಮಹತ್ತ್ವವು.

ಸೂ. ೧೬೫. ಭಾಂಡದಲ್ಲಾಗಲಿ, ಭಾಜನದಲ್ಲಾಗಲಿ, ಭೋಜನದಲ್ಲಾಗಲಿ ಇದ್ದ ಪ್ರಸಾದದಲ್ಲಿ ನಿರಂತರವೂ ಪ್ರಸಾದವೆಂಬ ಭಾವನೆಯು ಅವಿಚ್ಛಿನ್ನವಾಗಿರುವುದು. ಇದೇ ಪ್ರಸಾದದ ಮಹತ್ತ್ವವು.

ಸೂ. ೧೬೬. ಶ್ರೇಷ್ಠವಾದ ಭಕ್ತಿಯಿಂದ ಕೂಡಿದ ಉಪಚಾರಸಹಿತವಾದ ಸ್ವೇಚ್ಛಾಕ್ರಿಯೆಯಲ್ಲಿ (ಅರ್ಪಣಕ್ರಿಯೆಯಲ್ಲಿ) ಮಾತ್ರ ಪ್ರಸಾದದಲ್ಲಿ ಪದಾರ್ಥ ಭಾವನೆಯು ಇರುವುದು. ಇದೂ ಪ್ರಸಾದದ ಮಹತ್ತ್ವವೆನಿಸುವುದು.

ಸೂ. ೧೬೭. ಯಾವಾತನು ಪ್ರಸಾದಪರವಾದ ಬುದ್ಧಿಯಿಂದ ಪ್ರಸಾದಾಷ್ಟಕವಿದನ್ನು ಅನುದಿನವೂ ಪಠಿಸುವನೋ ಆವನು ಪ್ರಸಾದಜ್ಞನಾದ ಪುರುಷನಾಗುವನು.

ಇತಿ ಪ್ರಸಾದಮಾಹಾತ್ಮ್ಯಂ ಕಥಿತಂ ತೇ ಮಯಾಽನಘ
ಷಟ್‌ಸ್ಥಲಾತ್ಮಕರೂಪೇಣ ಪ್ರಸಾದಂ ತಂ ಸದಾ ಭಜ ೧೬೮

ಆಚಾರೇಣ ಚ ಗುರುಣಾ ಶಿವೇನ ಚರಮೂರ್ತಿನಾ ಪ್ರಸಾದೇನ
ಮಹತಾಽಽಘ್ರಾತಂ ಪೀತಂ ದೃಷ್ಟಂ ಸ್ಪೃಷ್ಟಂ ಶ್ರುತಂ
ಸ್ಮೃತಂ ಚ ಭಜ ೧೬೯

ಭೋಕ್ತರಿ ಭೋಗೇ ಚ ತಥಾ ಭೋಜಯಿತರಿ
ಭೋಗಸಾಧಕೇ ಕರಣೇ
ಏತಸ್ಮಿನ್ನಪಿ ಸಕಲೇ ಭಜ ಪ್ರಸಾದಂ ಸದಾತ್ಮರೂಪೇಣ ೧೭೦

ಭಾಂಡೇ ಚ ಬಹುಧಾ ಭಿನ್ನೇ ಭಾಜನೇ ಚ ತಥೈವ ಚ
ಅಭೇದಪ್ರತಿಪತ್ತ್ಯೈವ ಪ್ರಸಾದಂ ಭಜ ಸರ್ವದಾ ೧೭೧

---

ಸೂ. ೧೬೮. ನಿರ್ಮಲನೆ, ಹೀಗೆ ಪ್ರಸಾದಮಾಹಾತ್ಮವು ನಿನಗೆ ನನ್ನಿಂದ ಉಕ್ತವಾಗಿರುವುದು. ನೀನು ಷಟ್‌ಸ್ಥಲಾಚರಣೆಗನುಸರಿಸಿ ಯಾವಾಗಲೂ ಆ ಪ್ರಸಾದವನ್ನು ಹೊಂದುತ್ತಿರು.

### ಷಡ್ಲಿಂಗಗಳ ಪ್ರಸಾದಭೋಗಕ್ರಮ

ಸೂ. ೧೬೯. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ - ಇವುಗಳಿಂದ ಕ್ರಮವಾಗಿ, ಆಘ್ರಾತವಾದ ಗಂಧವನ್ನು, ಪೀತವಾದ ರಸವನ್ನು, ದೃಷ್ಟವಾದ ರೂಪವನ್ನು, ಮುಟ್ಟಿದ ಸ್ಪರ್ಶವನ್ನು, ಶ್ರುತವಾದ ಶಬ್ದವನ್ನು, ಸ್ಮೃತವಾದ ತೃಪ್ತಿಯನ್ನು ನೀನು ಯಾವಾಗಲೂ ಪ್ರಸಾದರೂಪದಿಂದ ಪಡೆಯುತ್ತಿರು.

ಸೂ. ೧೭೦. ಭೋಕ್ತೃವಿನಲ್ಲಿ, ಭೋಗದಲ್ಲಿ, ಭೋಗಪ್ರದನಲ್ಲಿ, ಭೋಗಸಾಧನದಲ್ಲಿ – ಈ ಎಲ್ಲದರಲ್ಲಿಯೂ ನೀನು ಯಾವಾಗಲೂ ಆತ್ಮರೂಪದಿಂದ ಪ್ರಸಾದಭಾವನೆಯುಳ್ಳವನಾಗಿರು.

### ಭಾಂಡಭಾಜನ ಪ್ರಸಾದಸ್ವರೂಪ

ಸೂ. ೧೭೧. ಬಹುವಿಧವಾಗಿರುವ ಭಾಂಡಗಳಲ್ಲಿಯೂ ಭಾಜನಗಳ-ಗಳಲ್ಲಿಯೂ ಇರುವ ಪ್ರಸಾದವನ್ನು ಅಭೇದಭಾವನೆಯಿಂದ ನೀನು ಯಾವಾಗಲೂ ಪಡೆಯುತ್ತಿರು.

ಏಕ ಏವ ಭವೇಚ್ಛೇಷೋ ಭಾಂಡಭಾಜನಯೋೇರಪಿ
ಇತಿ ಶೇಷಪ್ರಸಾದಂ ತ್ವಂ ಭಜ ಭಾವಪುರಃಸರಂ ೧೭೨

ಭಾಂಡೋ ದೇಹೋ ಭಾಜನಂ ಚೇಂದ್ರಿಯಾಣಿ ಜೀವಾತ್ಮಾಯಂ
ದ್ರವ್ಯರೂಪಂ ಯದನ್ನಂ
ಭಕ್ತ್ಯಾ ಲಿಂಗಾಯಾರ್ಪಯಿತ್ವಾ ಪರಸ್ಮೈ ಶೇಷೀಭೂತಂ ತಂ
ಪ್ರಸಾದಂ ಭಜಸ್ವ ೧೭೩

---

ಸೂ. ೧೭೨. ಭಾಂಡ ಭಾಜನಗಳಲ್ಲಿ ಶೇಷವಾಗಿರುವುದು ಒಂದೇ ಪ್ರಸಾದವೇ ಎಂಬ ಭಾವಪೂರ್ವಕವಾಗಿ ನೀನು ಶೇಷಪ್ರಸಾದವನ್ನು ಹೊಂದು.

ಸೂ. ೧೭೩. ಭಾಂಡವೇ ( ಪಾಕಪಾತ್ರೆ ) ದೇಹವು. ಭಾಜನವೇ ( ಭೋಜನಪಾತ್ರೆ ) ಇಂದ್ರಿಯಗಳು. ಈ ಜೀವಾತ್ಮನೇ ದ್ರವ್ಯರೂಪವಾದ ಅನ್ನವು ( ಪದಾರ್ಥವು ) ಭಕ್ತಿಯಿಂದ ಪರಲಿಂಗಕ್ಕೆ ಈ ಜೀವಾತ್ಮಪದಾರ್ಥವನ್ನರ್ಪಿಸಿ, ಶೇಷಭೂತವಾದ ಪ್ರಸಾದವನ್ನು ಹೊಂದು.

ವಿಚಾರ

ನಿಯತಕಾಲದ ಪೂಜೆಯಲ್ಲಿ ಪಾಕಪಾತ್ರೆಯಲ್ಲಿರುವ ಅನ್ನಾದಿಕವನ್ನೇ ಭೋಜನಪಾತ್ರೆಯಲ್ಲಿಟ್ಟುಕೊಂಡು ಅರ್ಪಣಯೋಗ್ಯವಾದ ಪದಾರ್ಥವನ್ನಾಗಿ ಸಂಸ್ಕರಿಸಿ ಅದನ್ನು ಇಷ್ಟಲಿಂಗಕ್ಕರ್ಪಿಸಿ, ಪ್ರಸಾದವನ್ನಾಗಿ ಪಡೆದುಕೊಂಡು ಭೋಗಿಸಬೇಕು. ಇನ್ನು ಅನಿಯತಕಾಲದ ( ಸರ್ವಕಾಲದ ) ಪೂಜೆಯಲ್ಲಿ ದೇಹವೆಂಬ ಭಾಂಡದಲ್ಲಿರುವ ಜೀವಾತ್ಮರೂಪವಾದ ತನ್ನನ್ನು ಭಾಜನರೂಪವಾದಿಂದ್ರಿಯಗಳ ಮುಖದಿಂದ ಲಿಂಗಾರ್ಪಿತವನ್ನು ಮಾಡಿ ಅರ್ಪಿತವಾದ ತನ್ನನ್ನು ಯಾವಾಗಲೂ ಪ್ರಸಾದರೂಪನೆಂದು ತಿಳಿದಾಚರಿಸಬೇಕು. ನಿಯತಕಾಲದ ಪೂಜೆಯಲ್ಲಿ ಅರ್ಪಣವು ಕ್ರಿಯಾಪ್ರಧಾನವಾಗಿರುವುದು. ಅನಿಯತಕಾಲದಲ್ಲಿ ಅರ್ಪಣವು ಜ್ಞಾನಪ್ರಧಾನವಾಗಿರುವುದು.

ಶರೀರಾದಿಪದಾರ್ಥಾಂಶ್ಚ ದತ್ವಾ ದಾನಂ ಸಮರ್ಪಣಂ
ಸಮರ್ಪ್ಯ ಸೋಽಹಮಸ್ಮೀತಿ ದಾಸೋಹಂಭಾವ ಉಚ್ಯತೇ ೧೭೪

ನಾಹಮನಾತ್ಮಾ ಪಶ್ಚಾತ್ ಸೋಽಹಂ ಸೋಹಂ ಪದಸ್ಥ
ಆತ್ಮಾ ಸಾಕ್ಷೀ
ತತ್ಪತಿಶಿವದಾಸೋಽಹಂ ದಾಸೋಹಮಿತಿ
ಚರೇದುಪರಿ ಪದೇ ೧೭೫

---

## ವೀರಶೈವರ ದಾಸೋಹಂಭಾವ ಸ್ವರೂಪ

ಸೂ. ೧೭೪. ಭಕ್ತನು ಶರೀರಾದಿ ಪದಾರ್ಥಗಳನ್ನು ದಾನವಾಗಿ ಕೊಟ್ಟರೆ ಎಂದರೆ, ಶರೀರಾದಿ ಪದಾರ್ಥಗಳು ನನ್ನವೆಂಬ ಮಮಕಾರವನ್ನು ಬಿಟ್ಟು ಅರ್ಪಿಸಿದರೆ – ಅರ್ಪಣವೆನಿಸುವುದು. ಈ ರೀತಿಯಾಗಿ ಅರ್ಪಿಸಿ, ' ಸೋಽಹಮಸ್ಮಿ, ಶಿವನಿಗೆ - ಅರ್ಪಿತನಾದವನು ನಾನಿರುವೆನೆಂಬ ಭಾವವೇ ದಾಸೋಽಹಂಭಾವವೆನಿಸುವುದು.

ಸೂ. ೧೭೫. ನಾನು ದೇಹೇಂದ್ರಿಯಾದಿರೂಪವಾದ ಅನಾತ್ಮ (ಜಡ) ನಲ್ಲ. ಮತ್ತೇನೆಂದರೆ ಸೋಽಹಂ–ಸೋಽಹಂ ಎಂಬ ಪದಗಳಿಂದ ಬೋಧಿತ ನಾಗುವ ದೇಹೇಂದ್ರಿಯಾದಿಗಳಿಗೆ ಸಾಕ್ಷೀಭೂತನಾದ ಆತ್ಮನಿರುವೆನು. ಮತ್ತು ಆ ಆತ್ಮಪತಿಯಾದ ಶಿವನ ದಾಸನು ನಾನು. ಹೀಗೆ ಜ್ಞಾನಕ್ಕಿಂತಲೂ ಮುಂದಿರುವ ಭಕ್ತಿಪದದಲ್ಲಿ ದಾಸೋಽಹಂಭಾವದಿಂದ ಆಚರಿಸಬೇಕು.

### ವಿಚಾರ

೧೭೪ - ೧೭೫ ನೆಯ ಸೂತ್ರಗಳಲ್ಲಿ ಉಕ್ತವಾದ ದಾಸೋಽಹಂಭಾವಸ್ವರೂಪವು, ಇತರರ ದ್ವೈತಭಕ್ತಿಮಾರ್ಗದ ದಾಸೋಽಹಂಭಾವಕ್ಕಿಂತಲೂ ಭಿನ್ನವಾಗಿರುವುದು. ದ್ವೈತಭಕ್ತಿಮಾರ್ಗದಲ್ಲಿ ಪರಮಾತ್ಮನಿಗೂ ಜೀವಾತ್ಮನಿಗೂ ಯಾವಾಗಲೂ ಭೇದವಿರುವುದು. ಮುಕ್ತಾವಸ್ಥೆಯಲ್ಲಿಯೂ ಜೀವಾತ್ಮನು ಪರಮಾತ್ಮಭಿನ್ನವಾಗಿಯೇ ದಾಸೋಹಂಭಾವದಿಂದಿರಬೇಕು. ವೀರಶೈವರ ಅದ್ವೈತಭಕ್ತಿಮಾರ್ಗದಲ್ಲಿ ಶಿವಜೀವರ ಭೇದವಿಲ್ಲ. ಜೀವನು ಶಿವನಿಗೆ

ಶಬ್ದಬ್ರಹ್ಮಜ್ಞಾನಂ ನಿಃಶಬ್ದಬ್ರಹ್ಮಸತ್ಕ್ರಿಯಾ ನಿಷ್ಠಾ
ಶಬ್ದಬ್ರಹ್ಮ ಯದುಕ್ತಂ ನಿಃಶಬ್ದಬ್ರಹ್ಮ ತಚ್ಚರತಿ ತೂಷ್ಣೀಂ ೧೭೬

ಭಕ್ತಿರ್ಭೂತಿತ್ರಿಪುಂಡ್ರಾಂಕರುದ್ರಾಕ್ಷಾಣಾಂ ನಿಷೇವಣಂ
ಜ್ಞಾನಂ ಷಡಕ್ಷರೋ ಮಂತ್ರೋ ಯೋಗೋ ಲಿಂಗಾಂಗಸಂಗಮಃ ೧೭೭

ಯೋ ಭಕ್ತಿಜ್ಞಾನಯೋಗಾರ್ಥಃ ಸತ್ತತ್ತ್ವಮಸಿ ನಿರ್ಣಯಃ
ಯೋ ನಿರ್ಣಯಃ ಸ ಲಿಂಗಾಂಗಸಂಬಂಧಾರ್ಥೋ ನ ಸಂಶಯಃ ೧೭೮

---

ಅರ್ಪಿತನಾಗಿ ಪ್ರಸಾದರೂಪವನ್ನು ಪಡೆದು, ಪ್ರಸಾದರೂಪನಾದ ಶಿವನೇ ಆಗಿರುವನು. ಆದರೆ ಪೂಜಾಕಾಲದಲ್ಲಿ ಮಾತ್ರ ಜೀವನು ತನ್ನನ್ನು ಪದಾರ್ಥವೆಂದು ಭಾವಿಸಿ ದಾಸೋಽಹಂಭಾವದಿಂದ ಶಿವನಿಗೆ ಅರ್ಪಿಸಿಕೊಳ್ಳುವನು. ಹೀಗೆ ಅರ್ಪಣದೃಷ್ಟಿಯಿಂದ ವೀರಶೈವನು ದಾಸೋಽಹಂಭಾವದಿಂದಿರುವನು. ಇದೇ ವೀರಶೈವರ ದಾಸೋಽಂಭಾವದ ಸ್ವರೂಪ.

### ಶಬ್ದಬ್ರಹ್ಮನಿಃಶಬ್ದಬ್ರಹ್ಮಸ್ವರೂಪ

ಸೂ. ೧೭೬. ಜ್ಞಾನವು ಶಬ್ದಬ್ರಹ್ಮವೆನಿಸುವುದು. ನಿಷ್ಠಾರೂಪವಾದ ಭಕ್ತಿಕ್ರಿಯೆಯು ನಿಃಶಬ್ದಬ್ರಹ್ಮವೆನಿಸುವುದು. ಶಬ್ದಬ್ರಹ್ಮವು ಯಾವುದನ್ನು ಹೇಳುವುದೋ ಅದನ್ನು ಮೌನವಾಗಿ ನಿಃಶಬ್ದಬ್ರಹ್ಮವು ಮಾಡಿ ತೋರಿಸುವುದು. ಎಂದರೆ - ಜ್ಞಾನವು ಮಾತಿನಿಂದ ತಿಳಿಸುವ ಬ್ರಹ್ಮಸ್ವರೂಪವೇ ಶಬ್ದಬ್ರಹ್ಮಸ್ವರೂಪವು. ಭಕ್ತಿಕ್ರಿಯೆಯು ಆಚರಣೆಯಿಂದ ಆ ಶಬ್ದಬ್ರಹ್ಮಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಕೊಂಡಾಗ ಅದು ನಿಃಶಬ್ದಬ್ರಹ್ಮವೆನಿಸುವುದು. ಈ ಅಭಿಪ್ರಾಯವನ್ನೇ ಸೂತ್ರಕಾರನು ಶಿವಾನುಭವಸೂತ್ರದ ೮ನೆಯ ಅಧಿಕರಣದಲ್ಲಿ "ಜ್ಞಾನಂ ಬ್ರೂತೇ ಭಕ್ತಿಃ ಕುರುತೇ" ಎಂಬ ವಾಕ್ಯದಿಂದ ವ್ಯಕ್ತಪಡಿಸಿರುವನು.

### ಷಟ್‌ಸ್ಥಲಕ್ಕನುಸರಿಸಿದ ಭಕ್ತಿಜ್ಞಾನಯೋಗಗಳ ಸ್ವರೂಪ

ಸೂ. ೧೭೭, ೧೭೮. ಷಟ್‌ಸ್ಥಲದ ಉಪಾಸನೆಯಲ್ಲಿ-ಭಸ್ಮತ್ರಿಪುಂಡ್ರದ ಮತ್ತು ರುದ್ರಾಕ್ಷಗಳ ಧಾರಣವೇ ಭಕ್ತಿಯು. ಗುರೂಪದಿಷ್ಟವಾದ ಷಡಕ್ಷರಮಂತ್ರದ ಜ್ಞಾನವೇ ಜ್ಞಾನವು. ಲಿಂಗಾಂಗಸಂಯೋಗವೇ

ಮಾರ್ಗೋ ದರ್ಶಯಿತಾ ದೃಷ್ಟಾ ದೃಕ್ ಚ ದರ್ಶನಮಪ್ಯತಃ
ದೃಷ್ಟವ್ಯೋ ಗತಿರಿತ್ಯೇಭಿರಾಚಾರಾದುಪದಿಶ್ಯತೇ ೧೭೯

ಮಾರ್ಗ ಏವ ಸದಾಚಾರೋ ಗುರುರ್ದರ್ಶಯಿತಾ ಯತಃ
ದೃಷ್ಟಾsತ್ಮಾ ದೃಕ್ ಭವೇಲ್ಲಿಂಗಂ ದರ್ಶನಂ ತು ಚರಂ ಸ್ಮೃತಂ. ೧೮೦

ದೃಷ್ಟವ್ಯೋsಯಂ ಪ್ರಸಾದಃ ಸ್ಯಾತ್ಪ್ರಾಪ್ತಿರ್ಮಹದಿಹೋಚ್ಯತೇ
ಏವಂ ಷಡಂಗಲಿಂಗೈಕ್ಯಸ್ಥಲಮದ್ವೈತಮುತ್ತಮಂ
ಆಶ್ರಿತ್ಯ ಷಟ್‌ಸ್ಥಲಬ್ರಹ್ಮಪದೇ ನಿತ್ಯಸುಖೀ ಭವೇತ್ ೧೮೧

---

ಯೋಗವು (೧೭೭). ಈ ಭಕ್ತಿಜ್ಞಾನಯೋಗಗಳ ಅರ್ಥವೇ 'ತತ್ತ್ವಮಸಿ' ಎಂಬ ವಾಕ್ಯದಿಂದ ನಿರ್ಣಯಿಸಲ್ಪಡುವುದು. ಆ ನಿರ್ಣಯವೇ ಲಿಂಗಾಂಗ ಸಂಬಂಧಾರ್ಥವಾಗಿರುವುದು. ಈ ವಿಷಯದಲ್ಲಿ ಸಂಶಯವಿಲ್ಲ. ಎಂದರೆ, 'ತತ್' ಪದದಿಂದ ಲಿಂಗವೂ, 'ತ್ವಂ' ಪದದಿಂದ ಅಂಗವೂ, 'ಅಸಿ' ಪದದಿಂದ ಸಂಬಂಧವೂ ಬೋಧವಾಗುವುದೆಂದೂ ತಾತ್ಪರ್ಯ (೧೭೮).

ಆಚರಣದ ದೃಷ್ಟಿಯಿಂದ ಷಡ್ಲಿಂಗಗಳ ಸ್ವರೂಪ

ಸೂ. ೧೭೯, ೧೮೦, ೧೮೧. ಮಾರ್ಗ, ಮಾರ್ಗದರ್ಶಕ, ಮಾರ್ಗದೃಷ್ಟ, ದೃಷ್ಟಿ, ದರ್ಶನ, ದೃಷ್ಟವ್ಯ, ಗತಿ – ಎಂಬಿವುಗಳಿಂದ ಆಚರಣೆಗಾಗಿ ಹೀಗೆ ಉಪದೇಶಿಸಲ್ಪಡುವುದು (೧೭೯). ಸದಾಚಾರವೇ (ಆಚಾರಲಿಂಗ) ಮಾರ್ಗವು. ಮಾರ್ಗದರ್ಶಕನೇ ಗುರು (ಗುರುಲಿಂಗ). ಮಾರ್ಗವನ್ನು ತಿಳಿಯುವವನು ಆತ್ಮನು (ಅಂಗ). ತಿಳಿದ ದೃಷ್ಟಿಯೇ ಲಿಂಗ (ಶಿವಲಿಂಗ). ದೃಷ್ಟಿಗೆ ಲಭಿಸಿದ ಸಾಕ್ಷಾತ್ಕಾರರೂಪದರ್ಶನವೇ ಜಂಗಮ (ಜಂಗಮಲಿಂಗ) (೧೮೦). ಜಂಗಮದರ್ಶನದಿಂದ ದೃಷ್ಟವ್ಯವಾದುದೇ ಪ್ರಸಾದ (ಪ್ರಸಾದಲಿಂಗ). ಪ್ರಸಾದದ ಪ್ರಾಪ್ತಿಯೇ ಮಹತ್ತು (ಮಹಾಲಿಂಗ). ಹೀಗೆ ಷಡಂಗಲಿಂಗಗಳ ಐಕ್ಯರೂಪವಾದುತ್ತಮಾದ್ವೈತವನ್ನಾಶ್ರಯಿಸಿ, ಷಟ್‌ಸ್ಥಲಬ್ರಹ್ಮಪದದಲ್ಲಿ ನಿತ್ಯ ಸುಖಿಯಾಗಬೇಕು.

**ವಿಚಾರ**

ಆಚಾರ, ಆಚಾರದಿಂದ ಗುರು, ಗುರುವಿನಿಂದ ಲಿಂಗ, ಲಿಂಗದಿಂದ ಲಿಂಗಮುಖವಾದ ಜಂಗಮ, ಜಂಗಮನಿಂದ ಪ್ರಸಾದ, ಪ್ರಸಾದದಿಂದ ನಿತ್ಯ

ನೇತಿ ನೇತೀತಿ ನೇತೀತಿ ಶೇಷಿತಂ ಯತ್ಪರಂ ಪದಂ
ನಿರಾಕರ್ತುಮಶಕ್ಯತ್ವಾತ್ತದಸ್ಮೀತಿ ಸುಖೀ ಭವೇತ್ ೧೮೩

ಏವಂ ಮಹಾಕಾರುಣಿಕಃ ಪ್ರಸನ್ನೋ ಗುರುಪ್ರಸಾದಸ್ಯ
ಮಹತ್ತ್ವಮುಕ್ತ್ವಾ
ನಾತಃ ಪರಂ ಚೇತಿ ಬಭೂವ ತೂಷ್ಣೀಂ ಪರಾನುಭೂತ್ಯೇಕ-
ಸುಖಸ್ವರೂಪಃ ೧೮೪

ಇತ್ಯಾದಿಷ್ಟೋಽಥ ಗುರುಣಾ ನಿಃಶೇಷಚ್ಛಿನ್ನಸಂಶಯಃ
ಶಿಷ್ಯೋ ನತ್ವಾ ಗುರುಪದಂ ಭಕ್ತ್ಯಾಽಽಪ ಪರಮಂ ಸುಖಂ ೧೮೫

ಇತಿ ಪ್ರಸಾದಸದ್ಭಾವನಿರೂಪಣಮಕಾರಿ ಯತ್
ಗುರೂಕ್ತಂ ಮಾಯಿದೇವಾರ್ಯಪ್ರಭುಣಾ ಸ್ವಾನುಭೂತಿತಃ ೧೮೬

---

ತೃಪ್ತಿಯೆಂಬ ವಿಷಯವನ್ನೇ ಇಲ್ಲಿ ಸೂತ್ರಕಾರನು ಆಚರಣೆಯ ಸೌಕರ್ಯ-ಕ್ಕಾಗಿ ಮತ್ತೊಂದು ರೀತಿಯಿಂದ ವಿವರಿಸಿರುವನು. ಈ ವಿವರಣೆಯಲ್ಲಿ ಷಟ್‌ಸ್ಥಲಮಾರ್ಗಕ್ಕೆ ಸದಾಚಾರವೇ ತಳಹದಿಯಾಗಿರುವುದೆಂಬುದನ್ನು ಮರೆಯಬಾರದು.

### ನಿಷೇಧಮುಖದಿಂದ ಸ್ವಸ್ವರೂಪಜ್ಞಾನ

ಸೂ. ೧೮೩. ದೇಹೇಂದ್ರಿಯಾದಿಕವು ನಾನಲ್ಲವೆಂಬ ನಿಷೇಧದಿಂದ ಪ್ರಸಾದರೂಪದಿಂದುಳಿಯುವ ನಿರಾಕರಿಸಲಶಕ್ಯವಾದ ಆತ್ಮಸ್ವರೂಪವಾವುದುಂಟೋ; ಆ ಪ್ರಸಾದಾತ್ಮನೇ ನಾನೆಂದು ತಿಳಿದು ಸುಖಿಯಾಗಬೇಕು.

ಸೂ. ೧೮೪. ಹೀಗೆ ಪರಮಕಾರುಣಿಕನೂ ಪ್ರಸನ್ನನೂ ಆದ ಗುರುವು ಪ್ರಸಾದಮಹತ್ತ್ವವನ್ನು ಹೇಳಿ, ಇನ್ನು ಮುಂದೆ ಹೇಳುವದೇನೂ ಇಲ್ಲವೆಂದು ಸ್ವಾನುಭವೈಕ ಸುಖಸ್ವರೂಪದಿಂದ ಮೌನವನ್ನು ತಾಳಿದನು.

ಸೂ. ೧೮೫. ಹೀಗೆ ಉಪದೇಶಿಸಲ್ಪಟ್ಟ ಶಿಷ್ಯನು ಸಂಶಯರಹಿತನಾಗಿ ಭಕ್ತಿಯಿಂದ ಗುರುಚರಣಕ್ಕೆ ವಂದಿಸಿ ಪರಮಸುಖಿಯಾದನು.

ಸೂ. ೧೮೬. ಮಾಯಿದೇವಪ್ರಭುವು ಮೇಲಿನ ಕ್ರಮದಿಂದ ಗುರೂಕ್ತವಾದ ಪ್ರಸಾದಸದ್ಭಾವವನ್ನು ಹೀಗೆ ಸ್ವಾನುಭಾವದಿಂದ ನಿರೂಪಿಸಿದನು.

ಜಯತಿ ಪರಮಶೈವಃ ಸ್ವಾತ್ಮವಿದ್ಯಾಧಿದೈವಃ ಕುಹಕಮತವಿಭೇದೀ
ಷಟ್‌ಸ್ಥಲಬ್ರಹ್ಮವಾದೀ
ಗುರುಪದನಿಜಭಕ್ತಃ ಕೇವಲಾನಾದಿಮುಕ್ತಃ ಸುಚರಿತಶಿವವರ್ತ್ಮಾ
ಮಾಯಿದೇವೋ ಮಹಾತ್ಮಾ ೧೮೬

ಜಯ ಗುರುಪದಸಿದ್ಧೇ ಯೋಗಿನಿ ಪ್ರೇಮಭೂಮೇ
ಗುಣಗಣಮಣಿಭೂಷೇ ನಿರ್ಗುಣೇ ನಿರ್ವಿಕಾರೇ
ನಿರತಿಶಯನಿಜಾನಂದಪ್ರಸಾದಾಂಗಲಿಂಗಾನುಭವಘನಸಮಾಧಿ-
ಪ್ರಾಪ್ತಿಕೇ ಮಯ್ಯುಮೇ ತ್ವಂ ೧೮೭

ಉಮಾಯೈ ಸಶಿವಾಯೈ ತೇ ಸೋಮಾಯ ಸಶಿವಾಯ ತೇ
ಯುವಾಭ್ಯಾಂ ಚೈಪುರೇಶಾಭ್ಯಾಂ ನಮೋ ಭೂಯೋ
ನಮೋ ನಮಃ ೧೮೮

---

ಸೂ. ೧೮೬. ಪರಮಶೈವನೂ, ಸ್ವಾತ್ಮವಿದ್ಯೆಯ ಅಧಿದೈವಸ್ವರೂಪನೂ, ಕಪಟಮತವಿಭೇದಿಯೂ, ಷಟ್‌ಸ್ಥಲಬ್ರಹ್ಮವಾದಿಯೂ, ಗುರುಪದನಿಜ ಭಕ್ತನೂ, ಕೇವಲ ಅನಾದಿಮುಕ್ತನೂ, ಸುಚರಿತನೂ, ಶಿವಮಾರ್ಗ ವುಳ್ಳವನೂ, ಆದ ಮಾಯಿದೇವ ಮಹಾತ್ಮನು ಸರ್ವೋತ್ಕೃಷ್ಟನಾಗಿ ವರ್ತಿಸುವನು.

### ಶಿವಗತಶಕ್ತಿಸ್ತುತಿ

ಸೂ. ೧೮೭. ಗುರುಪದಸಿದ್ಧಳೂ, ಯೋಗಿನಿಯೂ, ಪ್ರೇಮಭೂಮಿ-ಯೂ, ಗುಣಗಣಮಣಿಭೂಷಣಳೂ, ನಿರ್ಗುಣಳೂ, ನಿರ್ವಿಕಾರಳೂ, ನಿರತಿಶಯ ನಿಜಾನಂದ ಪ್ರಸಾದಸ್ವರೂಪವಾದ ಲಿಂಗಾನುಭವಘನಸಮಾಧಿ ಯನ್ನುಂಟು ಮಾಡುವವಳೂ ಆದ ಉಮಾದೇವಿಯೆ, ನೀನು ನನ್ನಲ್ಲಿ ಜಯಶೀಲಳಾಗಿರು.

### ಶಿವಶಕ್ತಿಯರ ಸ್ತೋತ್ರ

ಸೂ. ೧೮೮. ಶಿವನೊಡನೆ ಅವಿನಾಭಾವ ಸಂಬಂಧದಿಂದಿರುವ ಉಮಾ ದೇವಿಯೆ, ನಿನಗೆ ನಮಸ್ಕಾರ. ಉಮಾಸಹಿತವಾದ ಸೋಮೇಶ್ವರನೆ, ನಿನಗೆ ನಮಸ್ಕಾರ. ಐಪುರಾಧೀಶ್ವರರಾದ ಶಿವಭಕ್ತಿಯರೆ, ನಿಮ್ಮುಭಯರಿಗೆ ಪುನಃ ಪುನಃ ನಮಸ್ಕಾರ.

ಉಮಾಮಹೇಶ್ವರಾಕಾರಾಯಾಂಗಲಿಂಗಸ್ವರೂಪಿಣೇ
ಷಟ್‌ಸ್ಥಲಬ್ರಹ್ಮಣೇ ತುಭ್ಯಂ ಸೋಮೇಶಾಯ ನಮೋ ನಮಃ ೧೮೯

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೧೯೦

ಇತಿ ಶ್ರೀ ಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ಪ್ರಸಾದಸದ್ಭಾವನಿರೂಪಣಂ ನಾಮ
ತೃತೀಯಾಧಿಕರಣಂ
ಸಂಪೂರ್ಣಂ

---

ಸೂ. ೧೮೯. ಉಮಾಮಹೇಶ್ವರರ ಆಕಾರದಿಂದಿರುವ ಅಂಗಲಿಂಗಗಳ ಸ್ವರೂಪವುಳ್ಳ ಷಟ್‌ಸ್ಥಲಬ್ರಹ್ಮಮೂರ್ತಿಯೆನಿಸಿದ ಸೋಮೇಶ್ವರನೆ ನಿನಗೆ ನಮಸ್ಕಾರ.

ಅಧಿಕರಣ ಸಮಾಪ್ತಿ

ಸೂ. ೧೯೦. ಪರಾನುಭವಸೂತ್ರೋಕ್ತವಾಗಿರುವ ಪರಮಾರ್ಥಪದವಾದ ಈ ವಿಷಯ ನಿರೂಪಣೆಯನ್ನು ಯಾವಾತನು ತಿಳಿದು ಆಚರಿಸುವನೋ ಆತನೇ ಆಚಾರ್ಯಶ್ರೇಷ್ಠನಾದ ವಿಭುವೆನಿಸುವನು.

ಇಂತು ಶ್ರೀ ಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ಪ್ರಸಾದಸದ್ಭಾವನಿರೂಪಣವೆಂಬ
ತೃತೀಯಾಧಿಕರಣಂ
ಸಂಪೂರ್ಣಂ

॥ ಶ್ರೀಗುರುಲಿಂಗಜಂಗಮೇಭ್ಯೋ ನಮಃ ॥

## ಚತುರ್ಥಾಧಿಕರಣೇ ಷಟ್‌ಸ್ಥಲಬ್ರಹ್ಮಪುರಶ್ಚರಣಂ

**ಗುರು :**

ಅಥಾತಃ ಷಟ್‌ಸ್ಥಲಬ್ರಹ್ಮಪುರಶ್ಚರಣಮಾದರಾತ್
ಪ್ರವಕ್ಷ್ಯಾಮಿ ವಿಶೇಷೇಣ ಶಿವಸಿದ್ಧಾಂತತಂತ್ರಜಂ ೧

ಯತ್ರ ಕ್ವಾಪಿ ಸುಖೇ ಸ್ಥಾನೇ ವಿಶುದ್ಧೇ ನಿರುಪದ್ರವೇ
ನಿತ್ಯಕೃತ್ಯಂ ಸಮಾಪ್ಯಾಥ ಪರಿಕಲ್ಪ್ಯ ಸುಖಾಸನಂ ೨

---

ಚತುರ್ಥಾಧಿಕರಣದಲ್ಲಿ ಷಟ್‌ಸ್ಥಲಬ್ರಹ್ಮಪುರಶ್ಚರಣಂ

ಷಟ್‌ಸ್ಥಲಬ್ರಹ್ಮವಾಚಕವಾದ ಷಡಕ್ಷರಮಂತ್ರದ ಪುರಶ್ಚರಣಕ್ರಮವನ್ನು ಪ್ರತಿಪಾದಿಸುವನು.

ಗುರು. ಸೂ. ೧. ಪ್ರಸಾದಸದ್ಭಾವನಿರೂಪಣಾನಂತರದಲ್ಲಿ ಶಿವ-ಸಿದ್ಧಾಂತತಂತ್ರೋಕ್ತವಾದ ಷಟ್‌ಸ್ಥಲಬ್ರಹ್ಮಪುರಶ್ಚರಣವನ್ನು ವಿಶೇಷರೀತಿ-ಯಿಂದ ಆದರಪೂರ್ವಕವಾಗಿ ಹೇಳುವೆನು.

ಸೂ. ೨ ರಿಂದ ೫. ಉಪದ್ರವರಹಿತವಾದ ನಿರ್ಮಲವಾದ ಯಾವುದಾದರೊಂದು ಸುಖಸ್ಥಾನದಲ್ಲಿ ನಿತ್ಯವಿಧಿಯನ್ನು ಮುಗಿಸಿದ ಮೇಲೆ ಸುಖಾಸನ-

ಸಮಂತ್ರಕಂ ತದುಪರಿ ಚೋಪವಿಶ್ಯ ಯಥಾಸುಖಂ
ಭಕ್ತ್ಯಾ ಪರಮಯಾ ಯುಕ್ತಃ ಸುಖಾಸೀನಃ ಸುನಿಶ್ಚಲಃ ೩

ಧ್ಯಾತ್ವಾ ಗುರುಪದಂ ಸಮ್ಯಗ್ಭೂತಿಮಾಗೃಹ್ಯ ಶಾಂಭವೀಂ
ಸಮಾಹಿತಮನಾ ಭೂತ್ವಾ ಹಿತ್ವಾಽನ್ಯಾಂ ವಾಚಮಾತ್ಮನಃ ೪

ಷಟ್‌ಪ್ರಾಣಾಯಾಮಕಂ ಕೃತ್ವಾ ಬಧ್ವಾ ಚಾಂಜಲಿಮುದ್ರಿಕಾಂ
ಅಭಿಮಂತ್ರ್ಯ ಸತಾರೇಣ ಶ್ರೀಮತ್ಪಂಚಾಕ್ಷರೇಣ ಚ ೫

ಭಸ್ಮಜ್ಯೋತಿಃ ಸ್ವರೂಪಾಯ ಶಿವಾಯ ಪರಮಾತ್ಮನೇ
ಷಟ್‌ತ್ರಿಂಶತ್ತತ್ತ್ವಬೀಜಾಯ ನಮಃ ಶಾಂತಾಯ ತೇಜಸೇ ೬

ಇತಿ ಸಂಚಿತ್ಯ ತದ್ಭಸ್ಮ ಗೃಹೀತ್ವಾ ಚಾಭಿಮಂತ್ರಿತಂ
ಆಚಾರಲಿಂಗಾಯ ನಮ ಇತ್ಯಾದ್ಯೈಃ ಷಡ್ಭಿರಾತ್ಮನಃ ೭

---

ವನ್ನು ಏರ್ಪಡಿಸಿಕೊಂಡು (೨) ಆ ಆಸನದ ಮೇಲೆ ಮಂತ್ರಪೂರ್ವಕವಾಗಿ ಸುಖದಿಂದ ಕುಳಿತುಕೊಂಡು, ಶ್ರೇಷ್ಠಭಕ್ತಿಯಿಂದ ಮತ್ತು ನಿಶ್ಚಲತೆಯಿಂದ ಕೂಡಿದವನಾಗಿ (೩) ನಿಜಗುರುಪಾದವನ್ನು ಧ್ಯಾನಿಸಿ, ಏಕಾಗ್ರಚಿತ್ತವುಳ್ಳವನಾಗಿ, ತಾನು ಮಾಡುವ ಕ್ರಿಯೆಗೆ ಭಿನ್ನವಾದ ವಾಗ್ವ್ಯವಹಾರವನ್ನು ಬಿಟ್ಟು, ಶಿವಸಂಬಂಧವಾದ ಭಸ್ಮವನ್ನು ತೆಗೆದುಕೊಂಡು (೪) ಆ ಬಳಿಕ ಆರುಸಲ ಪ್ರಾಣಾಯಾಮವನ್ನು ಮಾಡಿ, ಅಂಜಲಿಬದ್ಧನಾಗಿ ಪ್ರಣವಸಹಿತವಾದ ಪಂಚಾಕ್ಷರಮಂತ್ರದಿಂದ ಭಸ್ಮವನ್ನಭಿಮಂತ್ರಿಸಿ (೫) (ಭಸ್ಮಾಭ್ಯುಕ್ಷಣವನ್ನು ಮಾಡಿಕೊಳ್ಳಬೇಕು).

### ಭಸ್ಮಾಭ್ಯುಕ್ಷಣಕ್ರಮ

ಸೂ. ೬ ರಿಂದ ೯. ಭಸ್ಮಜ್ಯೋತಿಃಸ್ವರೂಪನೂ, ಮೂವತ್ತಾರು ತತ್ತ್ವಗಳ ಮೂಲಕಾರಣನೂ, ಶಾಂತತೇಜನೂ, ಪರಮಾತ್ಮನೂ ಆದ ಶಿವನೆ ನಿನಗೆ ನಮಸ್ಕಾರವೆಂದು (೬) ಚಿಂತನಮಾಡುತ್ತ ಅಭಿಮಂತ್ರಿತವಾದ

ಪಾದಯೋರ್ನಾಭಿದೇಶೇ ಚ ಹೃದಯೇ ಚಾನನೇ ತಥಾ
ಮಸ್ತಕೇ ಚ ಶಿಖಾಯಾಂ ಚ ಸಮಭ್ಯುಕ್ಷ್ಯ ತತಃ ಪುನಃ ೮

ಶಿಖಾದಿಪಾದಪರ್ಯಂತೇಷ್ವೇಷು ಸ್ಥಾನೇಷ್ವನುಕ್ರಮಾತ್
ಮಹಾಲಿಂಗಾಯ ನಮ ಇತ್ಯಾದ್ಯೈರಭ್ಯುಕ್ಷ್ಯ ಪೂರ್ವವತ್ ೯

ತತ ಉದ್ಧೂಲನಂ ಕುರ್ಯಾದ್ವಿಧಿವನ್ಮಂತ್ರಪೂರ್ವಕಂ
ಹೃದಯಾದಿ ಚತುಃಸ್ಥಾನೇಷ್ವಥ ನಾಭೌ ಚ ಪಾದಯೋಃ ೧೦

ಉದ್ಧೂಲನಮಂತ್ರ ॥ ನಮಸ್ತೇ ಶಿವಲಿಂಗಾಯ ಘೋರರೂಪಾಯ ವಹ್ನಯೇ
ಭಸ್ಮದಿಗ್ಧಪ್ರಕಾಶಾಯ ಶಿಕಾರಮನುಮೂರ್ತಯೇ ೧೧

---

ಭಸ್ಮವನ್ನು ತೆಗೆದುಕೊಂಡು, ಮೂರನೆಯ ಅಧಿಕರಣದಲ್ಲಿ ಹೇಳಿರುವ "ಆಚಾರಲಿಂಗಾಯ ನಮಃ" ಇತ್ಯಾದಿಯಾದಾರು ಮಂತ್ರಗಳಿಂದ ಕ್ರಮವಾಗಿ ತನ್ನ ಪಾದಗಳು, ನಾಭಿ, ಹೃದಯ, ಮುಖ, ಮಸ್ತಕ, ಶಿಖೆ ಇವುಗಳ ಸ್ಥಾನದಲ್ಲಿ ಭಸ್ಮದಿಂದ ಅಭ್ಯುಕ್ಷಣವನ್ನು ಮಾಡಿಕೊಳ್ಳಬೇಕು. (೭-೮) ಆಮೇಲೆ ಶಿಖಾದಿಪಾದಪರ್ಯಂತ ಸ್ಥಾನಗಳಲ್ಲಿ ಕ್ರಮವಾಗಿ "ಮಹಾಲಿಂಗಾಯ ನಮಃ" ಇತ್ಯಾದಿಯಾದಾರು ಮಂತ್ರಗಳಿಂದ ಮೊದಲಂತೆ ಪುನಃ ಭಸ್ಮದಿಂದ ಅಭ್ಯುಕ್ಷಣವನ್ನು ಮಾಡಿಕೊಳ್ಳಬೇಕು (೯).

ಸೂ. ೧೦. ಆ ಮೇಲೆ ಹೃದಯ, ಮುಖ, ಮಸ್ತಕ, ಶಿಖೆ ಈ ನಾಲು ಸ್ಥಾನಗಳಲ್ಲಿ ಅನಂತರ ನಾಭಿ, ಪಾದ ಈ ಎರಡು ಸ್ಥಾನಗಳಲ್ಲಿ ವಿಧಿಗನು-ಸರಿಸಿ, ಮಂತ್ರಪೂರ್ವಕವಾಗಿ ಭಸ್ಮೋದ್ಧೂಲನವನ್ನು ಮಾಡಿಕೊಳ್ಳಬೇಕು.

ಸೂ. ೧೧-೧೨. ಭಸ್ಮೋದ್ಧೂಲನಮಂತ್ರ - "ನಮಸ್ತೇ ಶಿವಲಿಂಗಾಯ" ಇತ್ಯಾದಿಯಾದ ನಾಲ್ಕು ಮಂತ್ರಗಳಿಂದ ಹೃದಯಾದಿಯಾದ ನಾಲ್ಕು ಸ್ಥಾನಗಳಲ್ಲಿಯೂ, "ನಮಃ ಸದ್ಗುರುಲಿಂಗಾಯ" ಇತ್ಯಾದಿಯಾದೆರಡು

ಇತ್ಯಾದಿಭಿಶ್ಚತುರ್ಭಿಸ್ತು ಹೃದಯಾದಿಷ್ವನಂತರಂ
ನಮಃ ಸದ್ಗುರುಲಿಂಗಾಯೇತ್ಯಾದಿಭಿರ್ನಾಭಿಪಾದಯೋಃ ೧೨

ಸಮುದ್ಧೂಲ್ಯ ತತಃ ಸ್ನಾನಂ ಪ್ರಕುರ್ವೀತ ಸಮಂತ್ರಕಂ
ಭೂತಿಃ ಪರಾನುಭೂತಿಶ್ಚೇತ್ಯಾದ್ಯೈಃ ಸ್ನಾತ್ವಾ ಚ ಭಸ್ಮನಾ
ತ್ರಿಪುಂಡ್ರಧಾರಣಂ ಕುರ್ಯಾದ್ಭಸ್ಮನಾ ಸಜಲೇನ ಚ ೧೩

ಜಲೇನ ಮಿಶ್ರಿತಾ ಭೂತಿರಗ್ನಿಷ್ಟೋಮಾತ್ಮಿಕಾ ಶುಭಾ
ಶಿವಶಕ್ತಿಮಯೀ ಧಾರ್ಯಾ ತ್ರಿಪುಂಡ್ರೇಣ ತ್ರಿಧಾಽತ್ಮನಾ ೧೪

ಕೃತ್ವೈವಂ ಜಲಮಿಶ್ರಂ ತು ಸಮುದ್ಧೃತ್ಯ ಷಡಕ್ಷರೀಂ
ಧಾರಯೇತ್ತ್ರಿಪುಂಡ್ರಂ ತು ಮಂತ್ರೇಣಾನೇನ ಮಂತ್ರಿತಂ ೧೫

---

ಮಂತ್ರಗಳಿಂದ ನಾಭಿ, ಪಾದ ಈ ಎರಡು ಸ್ಥಾನಗಳಲ್ಲಿಯೂ ಭಸ್ಮೋದ್ಧೂಲನವನ್ನು ಮಾಡಿಕೊಳ್ಳಬೇಕು. ಆಮೇಲೆ ಭಸ್ಮಸ್ನಾನವನ್ನು ಮಾಡಬೇಕು. (ಭಸ್ಮೋದ್ಧೂಲನಮಂತ್ರಗಳು ಹಿಂದಿನ ಮೂರನೆಯ ಅಧಿಕರಣದಲ್ಲಿ ಉಕ್ತವಾಗಿರುವವು).

### ಭಸ್ಮಸ್ನಾನ ಮತ್ತು ತ್ರಿಪುಂಡ್ರಧಾರಣ

ಸೂ. ೧೩. ಮೂರನೆಯ ಅಧಿಕರಣದಲ್ಲಿರುವ " ಭೂತಿಃ ಪರಾನುಭೂತಿಶ್ಚ " ಇತ್ಯಾದಿ ಮಂತ್ರಗಳಿಂದ ಭಸ್ಮಸ್ನಾನವನ್ನು ಮಾಡಬೇಕು. ಆಮೇಲೆ ಜಲಮಿಶ್ರವಾದ ತ್ರಿಪುಂಡ್ರಧಾರಣವನ್ನು ಮಾಡಬೇಕು.

ಸೂ. ೧೪-೧೫. ಜಲಮಿಶ್ರವಾದ ಭಸ್ಮವು ಅಗ್ನಿಷ್ಟೋಮಸ್ವರೂಪವೂ, ಶಿವಶಕ್ತಿಮಯವೂ ಆಗಿ, ಶುಭಪ್ರದವಾಗಿರುವದು. ಈ ಜಲಮಿಶ್ರ ಭಸ್ಮವೇ ತ್ರಿವಿಧರೇಖೆಗಳಿಂದ ಧರಿಸಲು ಯೋಗ್ಯವು (೧೪). ಆದುದರಿಂದ ಭಸ್ಮವನ್ನು ಜಲಮಿಶ್ರವನ್ನಾಗಿ ಮಾಡಿ, ಷಡಕ್ಷರಮಂತ್ರೋಚ್ಚಾರದಿಂದ ತೆಗೆದುಕೊಂಡು ಅಭಿಮಂತ್ರಿತವಾದ ಭಸ್ಮವನ್ನು ತ್ರಿಪುಂಡ್ರವಾಗಿ ಧರಿಸಿಕೊಳ್ಳಬೇಕು (೧೫).

ತ್ರಿಪುಂಡ್ರಂ ತ್ರಿಗುಣಂ ತ್ರ್ಯಾತ್ಮಾ ತ್ರಿತತ್ತ್ವಂ ತ್ರಿತನು ತ್ರಿದೃಕ್
ತ್ರಿಕಾಲಶ್ಚ ತ್ರಿಮೂರ್ತಿಶ್ಚ ತ್ರಿಮಾತ್ರಾ ಚ ತ್ರಿಧಾ ತ್ರಿಧಾ ೧೬

ಇತಿ ಧೃತ್ವಾ ತ್ರಿಪುಂಡ್ರಂ ತು ರುದ್ರಾಕ್ಷಾನ್ ಧಾರಯೇತ್ತತಃ
ಮನೋಮುಖಾನಿ ಚಾಕ್ಷೀಣೀತ್ಯಾದಿ ಪೂರ್ವೋದಿತೈಃ ಕ್ರಮಾತ್ ೧೭

ರುದ್ರಾಕ್ಷಂ ಧಾರಯಿತ್ವಾಽಥ ಲಿಂಗಾಂಗಾತ್ಮವಪುಃ ಸ್ಮರೇತ್
ಭೂತಿಸ್ನಾನಂ ತ್ರಿಪುಂಡ್ರಾಂಕಂ ರುದ್ರಾಕ್ಷಾಣಾಂ ತು ಧಾರಣಂ
ಇತ್ಯಾದಿಭಿಸ್ತು ಪೂರ್ವೋಕ್ತೈರ್ಲಿಂಗಾಂಗಸ್ಥಲಬೋಧಿಭಿಃ ೧೮

---

ಸೂ. ೧೬. ತ್ರಿಪುಂಡ್ರಧಾರಣಮಂತ್ರ - ಸತ್ತ್ವಾದಿ ತ್ರಿಗುಣಸ್ವರೂಪವೂ, ಜೀವಾತ್ಮ - ಅಂತರಾತ್ಮ - ಪರಮಾತ್ಮರೂಪವಾದ ಆತ್ಮತ್ರಯಸ್ವರೂಪವೂ, ಶಿವ, ಸದಾಶಿವ, ಮಹೇಶ್ವರರೆಂಬ ತತ್ತ್ವತ್ರಯರೂಪವೂ, ಸ್ಥೂಲ, ಸೂಕ್ಷ್ಮ - ಕಾರಣಶರೀರಸ್ವರೂಪವೂ, ಚಂದ್ರ-ಸೂರ್ಯ-ಅಗ್ನಿರೂಪವಾದ ತ್ರಿನೇತ್ರಗಳ ಸ್ವರೂಪವೂ, ಭೂತಾದಿ ತ್ರಿಕಾಲಸ್ವರೂಪವೂ, ಬ್ರಹ್ಮಾದಿತ್ರಿಮೂರ್ತಿಸ್ವರೂಪವೂ, ಅ, ಉ, ಮ ಎಂಬ ತ್ರಿಮೂರ್ತಸ್ವರೂಪವೂ ಆಗಿರುವ ತ್ರಿರೇಖೆಯ ಭಸ್ಮದ ಸ್ವರೂಪವನ್ನು ಪ್ರತಿಪಾದಿಸುವ "ತ್ರಿಪುಂಡ್ರಂ ತ್ರಿಗುಣಂ" ಎಂಬ ಮಂತ್ರದಿಂದ ತ್ರಿಪುಂಡ್ರವನ್ನು ಧರಿಸಿಕೊಳ್ಳಬೇಕು.

ಸೂ. ೧೭, ೧೮. ಹೀಗೆ ತ್ರಿಪುಂಡ್ರಧಾರಣವನ್ನು ಮಾಡಿಕೊಂಡು, ಹಿಂದಿನ ಅಧಿಕರಣದಲ್ಲಿ ಹೇಳಿದ "ಮನೋಮುಖಾನಿ ಚಾಕ್ಷೀಣಿ" ಇತ್ಯಾದಿಯಾದ ಮಂತ್ರಗಳಿಂದ ಕ್ರಮವಾಗಿ ರುದ್ರಾಕ್ಷಧಾರಣವನ್ನು ಮಾಡಿಕೊಳ್ಳಬೇಕು (೧೭). ರುದ್ರಾಕ್ಷಧಾರಣಾನಂತರದಲ್ಲಿ ಲಿಂಗಾಂಗಸ್ವರೂಪದ ಶರೀರವುಳ್ಳ ತಾನು ಭೂತಿಸ್ನಾನ - ತ್ರಿಪುಂಡ್ರಧಾರಣ - ರುದ್ರಾಕ್ಷಧಾರಣಗಳ ವಿಷಯವಾಗಿ ಪೂರ್ವೋಕ್ತವಾಗಿರುವ ಲಿಂಗಾಂಗಸ್ಥಲಬೋಧಕ ಮಂತ್ರಗಳನ್ನು ಸ್ಮರಿಸಬೇಕು (೧೮).

ಆದೌ ಸ್ಥಲದ್ವಯಂ ಸ್ಮೃತ್ವಾ ದ್ವಿತೀಯೇಽಥ ಜಪೇನ್ಮನುಂ
ಅಸ್ಯ ಶ್ರೀಷಟ್‌ಸ್ಥಲಬ್ರಹ್ಮಷಡಕ್ಷರಮಹಾಮನೋಃ ೧೯

ಪರಬ್ರಹ್ಮ ಋಷಿಃ ಶೈವೀ ಗಾಯತ್ರೀಚ್ಛಂದ ಉಚ್ಯತೇ
ದೇವತಾಸ್ಯ ಶಿವಃ ಸಾಕ್ಷಾಚ್ಛಕ್ತಿರ್ಮಾಹೇಶ್ವರೀ ಮತಾ ೨೦

ಬೀಜಂ ಮಾಯಾಸಬಿಂದೂಕ್ತಂ ಶಿವಾಗ್ನಿದ್ವಯಸಂಯುತಂ
ಕೀಲಕಂ ಶಿವವಹ್ನಿಭ್ಯಾಂ ಚತುರ್ದಶಕಲಾನ್ವಿತಂ ೨೧

ಸಬಿಂದುಕಂ ಸಮಾಖ್ಯಾತಂ ವಿನಿಯೋಗೋಽಥ ಕಥ್ಯತೇ
ಮಮಾಹಂ ಸತಿ ದೇಹೇ ತು ಷಡೂರ್ಮ್ಯಾದಿನಿವೃತ್ತಯೇ ೨೨

ಷಟ್‌ಸ್ಥಲಬ್ರಹ್ಮನಿರ್ವಾಣಸುಖಸಂಪದವಾಪ್ತಯೇ
ಷಡಕ್ಷರಮನೋರ್ಜಾಪ್ಯಂ ಕರಿಷ್ಯೇ ಶಿವಯಾಜಿಕಂ ೨೩

---

ಸೂ. ೧೯ ರಿಂದ ೨೨. ಹೀಗೆ ಭಕ್ತಮಹೇಶಸ್ಥಲದ್ವಯವನ್ನು ಸ್ಮರಿಸಿ, ದ್ವಿತೀಯ ಮಹೇಶಸ್ಥಲಗತನಾಗಿ ಮಂತ್ರಜಪವನ್ನು ಮಾಡಬೇಕು ಈ ಶ್ರೀ ಷಟ್‌ಸ್ಥಲಬ್ರಹ್ಮಷಡಕ್ಷರ ಮಹಾಮಂತ್ರಕ್ಕೆ (೧೯) ಪರಬ್ರಹ್ಮನು ಋಷಿಯು, ಶಿವಗಾತ್ರಿಯು ಛಂದಸ್ಸು, ಸಾಕ್ಷಾತ್ತಾದ ಶಿವನು ಅಧಿದೇವ-ತೆಯು, ಮಹೇಶ್ವರಿಯು ಶಕ್ತಿಯು (೨೦) ಶಿವಾಗ್ನಿದ್ವಯದಿಂದ ಕೂಡಿದ ಬಿಂದುಸಹಿತವಾದ ಮಾಯಾಬೀಜವು. ಶಿವಾಗ್ನಿದ್ವಯದಿಂದ ಕೂಡಿದ ಬಿಂದುಸಹಿತವಾದ ಆಕಾರಾದಿಯಾದ ಚತುರ್ದಶ ಕಲಾಕ್ಷರಗಳಿಂದ ಕೂಡಿ-ದುದು ಕೀಲಕವು. ( ಇಲ್ಲಿ ಬೀಜಕೀಲಕಗಳ ಸ್ವರೂಪವು ಚೆನ್ನಾಗಿ ಗೊತ್ತಾಗದಂತಿರುವುದು).

## ವಿನಿಯೋಗಕ್ರಮ

ಸೂ. ೨೨ - ೨೩. ಅನಂತರದಲ್ಲಿ ವಿನಿಯೋಗವು ಹೇಳಲ್ಪಡುವುದು. ನನ್ನ ದೇಹದಲ್ಲಿರುವ ಷಡೂರ್ಮಿಗಳ ನಿವೃತ್ತಿಗಾಗಿಯೂ (೨೨) ಷಟ್-ಸ್ಥಲಬ್ರಹ್ಮಸಾಮರಸ್ಯಸುಖಸಂಪದದ ಪ್ರಾಪ್ತಿಗಾಗಿಯೂ ನಾನು ಶಿವಯಜ್ಞ ರೂಪವಾದ ಷಡಕ್ಷರಮಂತ್ರಜಪವನ್ನು ಮಾಡುವೆನು (೨೩).

ಷಟ್‌ಶತಸಹಸ್ರಸಂಖ್ಯಾಜಪರೂಪೋಽಯಂ ಷಡಕ್ಷರೋ ಮಂತ್ರಃ
ಷಟ್‌ಸ್ಥಲಬ್ರಹ್ಮಸ್ವರೂಪಃ ಶಿವ ಏವ ಸೋಽಹಮಿತಿ ನಿಷ್ಠಾ ೨೪

ಷಟ್‌ಸ್ಥಲರೂಪಿಣಿ ಪರಮೇ ಬ್ರಹ್ಮಣಿ ರುದ್ರಾನಲೇ
ಜುಹೋಮಿ ಸದಾ
ಆಹುತಿಮೇನಾಂ ಭಕ್ತ್ಯಾ ಷಡಕ್ಷರೀಂ ಷಟ್‌ಸಹಸ್ರ
ಜಪಸಂಖ್ಯಾಂ ೨೫

ಪ್ರಭಾವ ವೃದ್ಧ್ಯರ್ಥಮಿಮಾಂ ಮಹಾಹುತಿಂ ಷಡಕ್ಷರಾಖ್ಯಾಂ
ತವ ರುದ್ರವಹ್ನೌ
ಷಡಕ್ಷರಬ್ರಹ್ಮಪರಸ್ವರೂಪಿಣಿ ತಾಭಿಃ ಪ್ರಸನ್ನೋ ಭವ
ಜುಹ್ವತೋ ಮೇ ೨೬

—— - ——

ಸೂ. ೨೪. ಆರುಲಕ್ಷ ಸಂಖ್ಯೆಯ ಜಪದಿಂದ ಕೂಡಿದ ಷಡಕ್ಷರ ಮಂತ್ರವು ಷಟ್‌ಸ್ಥಲಬ್ರಹ್ಮಶಿವರೂಪವಾಗಿರುವುದು. ನಾನೂ ಮಂತ್ರ ರೂಪಶಿವನೇ ಇರುವೆನು - ಎಂಬ ನಿಷ್ಠೆ ಇರಬೇಕು. (ಇದು ಷಡಕ್ಷರ ಮಂತ್ರ ಜಪಸ್ವರೂಪವು. ಈ ಜಪದಲ್ಲಿ ಅಕ್ಷರಕ್ಕೆ ಲಕ್ಷಸಂಖ್ಯೆಯಂತೆ ಆರು ಲಕ್ಷ ಜಪಸಂಖ್ಯೆಯಿರುವುದೆಂದು ಗ್ರಹಿಸಬೇಕು).

ಸೂ. ೨೫. ಆರುಸಾವಿರದ ಜಪಸಂಖ್ಯೆಯಿಂದ ಕೂಡಿದ ಷಡಕ್ಷರ ಮಂತ್ರದ ಆಹುತಿಯನ್ನು ಷಟ್‌ಸ್ಥಲಪರಬ್ರಹ್ಮರೂಪವಾದ ರುದ್ರಾಗ್ನಿಗೆ ನಾನು ಯಾವಾಗಲೂ ಭಕ್ತಿಯಿಂದ ಕೊಡುವೆನು.

ಸೂ. ೨೬. ಶಿವನೆ, ಪ್ರಭಾವವೃದ್ಧ್ಯರ್ಥವಾಗಿ ಈ ಷಡಕ್ಷರಮಂತ್ರ ನಾಮಕವಾದ ಮಹಾಹುತಿಯನ್ನು ನಿನ್ನ ಷಡಕ್ಷರಬ್ರಹ್ಮಸ್ವರೂಪವಾದ ರುದ್ರಾಗ್ನಿಗೆ ಕೊಡುವೆನು. ಈ ಆಹುತಿಗಳಿಂದ ಹೋಮಮಾಡುವ ನನಗೆ ಪ್ರಸನ್ನನಾಗು.

ಏವಂ ವಿಜ್ಞಾಪನಂ ಕೃತ್ವಾ ನತ್ವಾ ಗುರುಪರಂಪರಾಂ
ಶಿವಾದ್ಯಾತ್ಮಾಂತಸಂಶುದ್ಧಾಂ ಶಿವವಿದ್ಯಾರ್ಥಪಾರಗಾಂ ೨೭

ಗುರುಂ ಷಡಕ್ಷರೀವಿದ್ಯಾರೂಪಿಣಂ ಷಟ್‌ಸ್ಥಲಾತ್ಮಕಂ
ಸ್ವೀಯಂ ಗುರುಪದಂ ಸಿದ್ಧಂ ನತ್ವಾ ನ್ಯಾಸಂ ಸಮಾಚರೇತ್ ೨೮

ಅಂಗುಷ್ಠಾದಿಕನಿಷ್ಠಾಂತಂ ಕರಯೋಃ ಪಂಚಶಾಖಿನೋಃ
ಮಧ್ಯತಃ ಪ್ರಣವಂ ಚಾಥ ವಿನ್ಯಸೇದಕ್ಷರಂ ಕ್ರಮಾತ್ ೨೯

ಶಿಖಾಮೂರ್ಧ್ವಲಲಾಟೇಷು ಹೃದಿ ನಾಭೌ ಪದದ್ವಯೇ
ಪುನಃ ಷಡಕ್ಷರೇಣೈವ ಷಡಂಗಂ ವಿನ್ಯಸೇತ್ ಕ್ರಮಾತ್ ೩೦

---

ಸೂ ೨೭, ೨೮. ಹೀಗೆಂದು ವಿಜ್ಞಾಪನ ಮಾಡಿದ ಬಳಿಕ, ಶಿವತತ್ತ್ವದಿಂದ ಆತ್ಮತತ್ತ್ವದ ವರೆಗಿರುವ ತತ್ತ್ವಗಳ ಪರಿಶುದ್ಧಿಯುಳ್ಳ ಮತ್ತು ಶಿವವಿದ್ಯೆಯ ಅರ್ಥಪ್ರತಿಪಾದನದಲ್ಲಿ ಪಾರಂಗತವಾದ ಗುರುಪರಂಪರೆಯನ್ನು ನಮಸ್ಕರಿಸಿ (೨೭) ಆಮೇಲೆ ಷಡಕ್ಷರೀ ವಿದ್ಯಾರೂಪವಾದ ಮತ್ತು ಷಟ್‌ಸ್ಥಲಾತ್ಮಕವಾದ ಸಿದ್ಧರೂಪದಿಂದಿರುವ ಸ್ವಕೀಯ ಗುರುಚರಣಕ್ಕೆ ನಮಸ್ಕರಿಸಿ, ನ್ಯಾಸವನ್ನು ಆಚರಿಸಬೇಕು (೨೮).

### ನ್ಯಾಸಕ್ರಮವು

ಸೂ. ೨೯: ಎರಡು ಹಸ್ತಗಳಲ್ಲಿ ಹೆಬ್ಬೆರಳಿನಿಂದ ಕಿರಿಬೆರಳಿನವರೆಗೂ ಕ್ರಮವಾಗಿ ಪಂಚಾಕ್ಷರಗಳನ್ನೂ, ಮಧ್ಯಭಾಗದಲ್ಲಿ ಪ್ರಣವವನ್ನೂ ನ್ಯಾಸ ಮಾಡಬೇಕು. (ಇದು ಕರನ್ಯಾಸವು)

ಸೂ. ೩೦. ಶಿಖೆ, ಮಸ್ತಕ, ಲಲಾಟ, ಹೃದಯ, ನಾಭಿ, ಪಾದದ್ವಯ – ಇವುಗಳಲ್ಲಿ ಕ್ರಮವಾಗಿ ಓಂಕಾರಾದಿಯಾದ ಷಡಕ್ಷರಗಳನ್ನು ನ್ಯಾಸಮಾಡಬೇಕು. (ಇದು ದೇಹನ್ಯಾಸವು)

ನಮಃ ಸ್ವಾಹಾವಷಟ್‌ವೌಷಟ್ ಹುಂಫಡಂತಂ ಹೃದಾದಿಕಂ
ಚತುರ್ಥೀಸಂಯುತಂ ಭೂಯ ಓಂಕಾರಾಯೇತಿ ಪೂರ್ವಕಂ ೩೧

ವಿನ್ಯಸ್ಯಾತ್ಮಾರ್ಪಣಾಯೈವ ವಿನಿಯುಜ್ಯ ಪುನಸ್ತತಃ
ನಮಃ ಶಿವಾಗ್ನಿಬೀಜಾಯ ಹರಾಯ ಪರಮಾತ್ಮನೇ ೩೨

ಓಂಕಾರಮಂತ್ರರೂಪಾಯ ಮೂಲಪಂಚಾಕ್ಷರಾತ್ಮನೇ
ಓಂಕಾರವದನಾ ದೇವೀ ನಮಃಕಾರಭುಜದ್ವಯಾ ೩೩

ಶಿಕಾರಮಧ್ಯಮಾ ಚೈವ ವಾಯಕಾರಪದದ್ವಯಾ
ಪಂಚಾಕ್ಷರೀ ಪರಾ ವಿದ್ಯಾ ಸತಾರಾ ಲಿಂಗರೂಪಿಣೀ
ಶಿವಮಂತ್ರಾಭಿಧಾ ಶೈವೀ ಮಮಾಂಗೇಽಧಿಷ್ಠಿತಾ ಸದಾ ೩೪

ಷಟ್‌ಸ್ಥಲಬ್ರಹ್ಮರೂಪಿಣಿ ಷಡಕ್ಷರಿ ಮಂತ್ರದೇವತೇ ಜನನಿ
ಷಟ್‌ಸ್ಥಲಭಕ್ತಿಪ್ರಸಾದಪರಮಸುಖೈಕಪ್ರದೇ ನಮಸ್ತುಭ್ಯಂ ೩೫

---

ಸೂ. ೩೧, ೩೨, ೩೩. ಓಂ ಹೃದಯಾಯ ನಮಃ, ಓಂ ಶಿರಸೇ ಸ್ವಾಹಾ, ಓಂ ಶಿಖಾಯೈವಷಟ್, ಓಂ ಕವಚಾಯ ಹುಂ, ಓಂ ನೇತ್ರ ತ್ರಯಾಯ ವೌಷಟ್, ಓಂ ಅಸ್ತ್ರಾಯ ಫಟ್ - ಎಂದು ಅಂಗನ್ಯಾಸವನ್ನು ಮಾಡಬೇಕು (೩೧). ಹೀಗೆ ನ್ಯಾಸ ಮಾಡಿ, ಆತ್ಮಾರ್ಪಣಕ್ಕಾಗಿಯೇ ವಿನಿಯೋಗಿಸಿ, ಆಮೇಲೆ ಶಿವಾಗ್ನಿಬೀಜಸ್ವರೂಪನೂ, ಹರನೂ, ಪರಮಾತ್ಮನೂ (೩೨) ಓಂಕಾರಮಂತ್ರರೂಪನೂ, ಮೂಲಪಂಚಾಕ್ಷರಾತ್ಮಕನೂ ಆದ ಶಿವನೆ ನಿನಗೆ ನಮಸ್ಕಾರ (೩೩). (ಹೀಗೆಂದು ನಮಸ್ಕರಿಸಿ)

ಸೂ. ೩೩, ೩೪. ಓಂಕಾರವೇ ವದನವಾಗಿರುವ, ನಮಃಕಾರಗಳೇ ಭುಜದ್ವಯವಾಗಿರುವ ಮತ್ತು ಶಿಕಾರವೇ ಮಧ್ಯದೇಹವಾಗಿರುವ, ವಾಯಕಾರಗಳೇ ಪದದ್ವಯವಾಗಿರುವ ಲಿಂಗರೂಪಿಯಾದ ಪರವಿದ್ಯೆಯೆನಿಸಿದ ಶಿವಮಂತ್ರಾಭಿಧಾನದಿಂದ ಕೂಡಿದ ಓಂಕಾರಸಹಿತವಾದ ಶಿವಪಂಚಾಕ್ಷರಿಯು ನನ್ನಂಗದಲ್ಲಿ ಯಾವಾಗಲೂ ಅಧಿಷ್ಠಿತವಾಗಿರುವುದು.

ಸೂ. ೩೫. ಷಟ್‌ಸ್ಥಲಬ್ರಹ್ಮರೂಪಿಣಿಯಾದ ಮತ್ತು ಷಡಕ್ಷರಮಂತ್ರದೇವತೆಯಾದ ಜನನಿಯೆ ಷಟ್‌ಸ್ಥಲಭಕ್ತಿಪ್ರಸಾದದ ಪರಸುಖವನ್ನುಂಟುಮಾಡುವ ನಿನಗೆ ನಮಸ್ಕಾರ.

ಇತ್ಯನುಜ್ಞಾಂ ತಯಾ ಲಬ್ಧ್ವಾ ಜಪೇತ್ ಪಂಚಾಕ್ಷರೀಂ ಶಿವಾಂ
ಸತಾರಾಂ ಷಟ್‌ಸ್ಥಲಬ್ರಹ್ಮರೂಪಿಣೀಂ ಶ್ರೀಷಡಕ್ಷರೀಂ ೩೬

ವಿದ್ಯಾ ಚತುರ್ವಿಧಾ ಶೈವೀ ಪರಾ ಪಶ್ಯಂತೀ ಮಧ್ಯಮಾ
ವೈಖರೀ ಚೇತ್ಯರ್ಥವರ್ಣಪದವಾಕ್ಯಪ್ರಭೇದತಃ ೩೭

ಓಮರ್ಥೋ ನಾದಿಯಾಂತಃ ಸ್ಯಾದ್ವರ್ಣಸ್ತತ್ರ ದ್ವಯಂ ತ್ರಯಂ
ಪದಂ ಭವೇತ್ತತ್ಸಮಷ್ಟಿರ್ವಾಕ್ಯಮಿತ್ಯಭಿಧೀಯತೇ ೩೮

ಅರ್ಥರೂಪಾ ಪರಾ ವಿದ್ಯಾ ಪಶ್ಯಂತೀ ವರ್ಣರೂಪಿಣೀ
ಮಧ್ಯಮಾ ಪದರೂಪಾ ಸ್ಯಾದ್ವೈಖರೀ ವಾಕ್ಯರೂಪಿಣೀ ೩೯

---

ಸೂ. ೩೬. ಹೀಗೆ ನಮಸ್ಕರಿಸಿ, ಆ ಜನನಿಯಿಂದನುಜ್ಞೆಯನ್ನು ಪಡೆದು ಷಟ್‌ಸ್ಥಲಬ್ರಹ್ಮರೂಪವೂ, ಶುಭಪ್ರದವೂ ಆದ ಶ್ರೀ ಷಡಕ್ಷರಮಂತ್ರದ ಜಪವನ್ನು ಮಾಡಬೇಕು.

### ಷಡಕ್ಷರೀ ವಿದ್ಯಾಭೇದ

ಸೂ. ೩೭. ಪರಾ - ಪಶ್ಯಂತೀ - ಮಧ್ಯಮಾ - ವೈಖರಿಯೆಂದು ಶಿವಸಂಬಂಧವಾದ ಷಡಕ್ಷರವಿದ್ಯೆಯು ನಾಲ್ಕು ಪ್ರಕಾರವಾಗಿರುವುದು. ಮತ್ತು ಆ ವಿದ್ಯೆಯು ಅರ್ಥ-ವರ್ಣ-ಪದ-ವಾಕ್ಯವೆಂಬ ನಾಲ್ಕು ಪ್ರಭೇದಗಳುಳ್ಳುದಾಗಿರುವುದು.

ಸೂ. ೩೮. 'ಓಂ ನಮಃ ಶಿವಾಯ' ಎಂಬ ಷಡಕ್ಷರಗಳಲ್ಲಿ - ಓಂಕಾರವು ಅರ್ಥರೂಪವಾಗಿಯೂ, 'ನಮಃ ಶಿವಾಯ' ಎಂಬೈದಕ್ಷರಗಳು ವರ್ಣರೂಪವಾಗಿಯೂ, 'ನಮಃ' 'ಶಿವಾಯ' ಎಂಬೆರಡು ಪದರೂಪವಾಗಿಯೂ, ಸಂಪೂರ್ಣವಾದ ಮಂತ್ರವು ವಾಕ್ಯರೂಪವಾಗಿಯೂ ಇರುವವೆಂದು ಉಕ್ತವಾಗಿರುವುದು.

ಸೂ. ೩೯. ಷಡಕ್ಷರವಿದ್ಯೆಯು ಪರೆಯೆನಿಸಿದಾಗ ಅರ್ಥರೂಪವಾಗಿಯೂ ಪಶ್ಯಂತಿಯೆನಿಸಿದಾಗ ವರ್ಣರೂಪವಾಗಿಯೂ, ಮಧ್ಯಮೆಯೆನಿಸಿದಾಗ ಪದರೂಪವಾಗಿಯೂ, ವೈಖರಿಯೆನಿಸಿದಾಗ ವಾಕ್ಯರೂಪವಾಗಿಯೂ ಇರುವುದು.

ಅರ್ಥೋ ಮನೋಭವೋ ವರ್ಣೋ ದೃಗ್ಭವೋ ವಾಗ್ಭವಂ ಪದಂ
ವಾಕ್ಯಂ ವಪುರ್ಭವಂತೇಷು ಮನೋ ದೃಗ್ವಾಗ್ವಪುಷ್ಯತಃ ೪೦

ಲಕ್ಷಣಂ ಕ್ರಮಶೋ ಜ್ಞೇಯಂ ಮನೋ ಮನನಲಕ್ಷಣಂ
ದೃಗ್ವಿಲೋಕನಚಿಹ್ನಂ ಸ್ಯಾದ್ವಾಗ್ವಚೋಮಾತ್ರಲಕ್ಷಣಂ ೪೧

ತಾಲ್ವೋಷ್ಠರಸನಾಯೋಗಲಕ್ಷಣಂ ವಪುರುಚ್ಯತೇ
ಮಾನಷೀ ಚಾಕ್ಷುಷೀ ಜಾತ್ಯಾ ವಾಚಿಕೀ ವಾಪುಷೀ ಪರಾ ೪೨

ಪಶ್ಯಂತೀ ಮಧ್ಯಮಾ ಚೇತಿ ವೈಖರೀತ್ಯುಚ್ಯತೇ ಕ್ರಮಾತ್ ೪೩

ಪ್ರಾಣಾಯಾಮಸುಗಂಧಿಗಂಧವಹ ಏಷೋಽಂತಃ ಸಮಾಧಿಸ್ಥಿತಃ
ಪ್ರಾಣೋ ಘ್ರಾಣಹೃಷೀಕತೋ ಬಹಿರನಾತ್ಮಾಚಾರಮರ್ಥಂ ವಿನಾ
ಜಾಪ್ಯೇ ಕರ್ಮಣಿ ಶಾಂಭವೇ ಪರಮಯಾ ಭಕ್ತ್ಯಾ ಸ್ವಭಕ್ತಿಸ್ಥಲೇ
ನಿತ್ಯಂ ವರ್ತತ ಆತ್ಮಚಾರಚರಿತಾಚಾರಾಖ್ಯಲಿಂಗಂ ಭಜನ್ ೪೪

---

ಸೂ. ೪೦ – ೪೩. ಅರ್ಥವು ಮನದಿಂದ, ವರ್ಣವು ದೃಕ್ಕಿನಿಂದ, ಪದವು ವಾಕ್ಕಿನಿಂದ, ವಾಕ್ಯವು ವಪುವಿನಿಂದ, ಕ್ರಮುವಾಗಿ ಉದ್ಭವಿಸುವವು. ಮನ, ದೃಕ್, ವಾಕ್, ವಪು - ಇವುಗಳಲ್ಲಿ (೪೦) ಕ್ರಮವಾಗಿರುವ ಲಕ್ಷಣ ವನ್ನು ಹೀಗೆ ತಿಳಿಯಬೇಕು - ಮನನ ಲಕ್ಷಣವುಳ್ಳುದು ಮನಸ್ಸು. ವಿಲೋಕನ ಚಿಹ್ನವುಳ್ಳುದು ದೃಕ್ಕು. ವಚನಲಕ್ಷಣವುಳ್ಳುದು ವಾಕ್ಕು(೪೧). ತಾಲು, ಓಷ್ಠ, ರಸನೆ ಇವುಗಳ ಯೋಗವುಳ್ಳುದು ಶರೀರವು. ಈ ಕಾರಣ ದಿಂದ ಪರೆಯು ಮಾನುಷಿಯೆಂದೂ, ಪಶ್ಯಂತಿಯು ಚಾಕ್ಷುಷಿಯೆಂದೂ ಮಧ್ಯಮೆಯು ವಾಚಿಕಿಯೆಂದೂ, ವೈಖರಿಯು ವಾವುಷಿಯೆಂದೂ ಕರೆ-ಯಲ್ಪಡುವುದು (೪೩).

### ಷಟ್‌ಸ್ಥಲಕ್ಕನುಸರಿಸಿದ ಜಪಕ್ರಮ

ಸೂ. ೪೪. ಭಕ್ತಸ್ಥಲದಲ್ಲಿ ನಾಸಿಕೇಂದ್ರಿಯದಿಂದ ಹೊರಸೂಸುವ ಪ್ರಾಣವಾಯುವು ಲಿಂಗಾರ್ಚನೆಯ ಪ್ರಾರಂಭದಲ್ಲಿ ಮಾಡಿದ ಪ್ರಾಣಾ-ಯಾಮವೆಂಬ ಸುಗಂಧವನ್ನು ವಹಿಸಿ, ನಿಶ್ಚಲತೆಯಿಂದಿರುತ್ತಿರಲು,

ಸರಸಷಡಕ್ಷರಮಂತ್ರಸ್ವರೂಪಗುರುಲಿಂಗಭಜನನಿಷ್ಣಾತ್ಮಾ
ನಿರುತಂ ನಿಜಜಿಹ್ವಾಯಾಂ ಚರತಿ ಹಿ ಮಾಹೇಶ್ವರಸ್ಥಲೇ ಜಾಪ್ಯಂ ೪೫

ಅನಿಮಿಷಚಕ್ಷುರ್ಭೂತ್ವಾ ಶಿವಲಿಂಗಂ ಸ್ವೇಷ್ಟರೂಪಮವಧಾನಾತ್
ವಿಲೋಕಯನ್ ಜಪತಿ ಸದಾ ಸ್ವಯಂ ಪ್ರಸಾದಿಸ್ಥಲೇ ಭಜನಶೀಲಃ ೪೬

ತ್ವಗಿಂದ್ರಿಯದ್ವಾರವಿರಾಜಮಾನಂ ಲಿಂಗಂ ಚರಂ ಸ್ಪರ್ಶನಜಾಪ್ಯ-
ಯೋಗಾತ್
ಭಜನ್ ಸದಾ ಸ್ವಾನುಭವೈಕವೇದ್ಯಂ ಸ ಪ್ರಾಣಲಿಂಗಿಸ್ಥಲ
ಏಷ ಆಸ್ತೇ ೪೭

---

ಅನಾತ್ಮರೂಪವಾದ ದೇಹದ ವ್ಯವಹಾರವನ್ನು ಬಿಟ್ಟು, ಆತ್ಮಕ್ಕೆ ಸಂಬಂಧಿಸಿದ ಸದಾಚಾರರೂಪವಾದ ಆಚಾರಲಿಂಗವನ್ನು ಭಜಿಸುತ್ತಿರುವ ಭಕ್ತನು ಶ್ರೇಷ್ಠಭಕ್ತಿಯಿಂದ ಯಾವಾಗಲೂ ಶಿವಸಂಬಂಧವಾದ ಜಪಕರ್ಮದಲ್ಲಿ ವರ್ತಿಸುತ್ತಿರುವನು, (ಈ ಸೂತ್ರದ ಅರ್ಥವು ಸ್ಫುಟವಾಗಿಲ್ಲವೆಂಬ ವಾದವಿರುವುದು).

ಸೂ. ೪೫. ಸರಸ ಷಡಕ್ಷರಮಂತ್ರಸ್ವರೂಪದ ಗುರುಲಿಂಗದ ಭಜನೆಯಲ್ಲಿ ನಿಷ್ಠೆಯುಳ್ಳವನಾದ ಭಕ್ತನು ಮಹೇಶ್ವರಸ್ಥಲಗತನಾಗಿ ತನ್ನ ರಸನೇಂದ್ರಿಯದಲ್ಲಿ ಯಾವಾಗಲೂ ಜಪಕ್ರಿಯೆಯನ್ನಾಚರಿಸುತ್ತಿರುವನು.

ಸೂ. ೪೬. ಭಜನಶೀಲನಾದ ಭಕ್ತನು ತಾನು ಪ್ರಸಾದಿಸ್ಥಲಗತನಾಗಿ ತನ್ನ ಇಷ್ಟಮೂರ್ತಿಯಾದ ಶಿವಲಿಂಗವನ್ನು ಅನಿಮಿಷದೃಷ್ಟಿಯಿಂದ ಅವಧಾನಪೂರ್ವಕವಾಗಿ ಅವಲೋಕಿಸುತ್ತ ಮಂತ್ರಜಪವನ್ನು ಯಾವಾಗಲೂ ಮಾಡುತ್ತಿರುವನು.

ಸೂ. ೪೭. ಪ್ರಾಣಲಿಂಗಿಸ್ಥಲಗತನಾಗಿ ಭಕ್ತನು ತ್ವಗಿಂದ್ರಿಯ ಮುಖದಲ್ಲಿ ಪ್ರಕಾಶಿಸುವ ಜಂಗಮಲಿಂಗವನ್ನು ಸ್ಪರ್ಶನರೂಪ-ಜಪಕ್ರಿಯಾಯೋಗದಿಂದ ಸ್ವಾನುಭವೈಕವೇದ್ಯವನ್ನಾಗಿ ಮಾಡಿಕೊಂಡು ಭಜಿಸುತ್ತಿರುವನು.

ಮಂತ್ರೋಚ್ಚಾರಣಶಬ್ದಾಮೃತಮಯಜಾಪ್ಯಾತ್ ಪ್ರಸಾದಘನಲಿಂಗಂ
ಶ್ರೋತ್ರೇಂದ್ರಿಯಮುಖಶರಣಸ್ಥಲವರ್ತೀ ಭಜತಿ ಪರಿಣತಾನಂದಃ ೪೮

ಮಂತ್ರಾರ್ಥರೂಪಮಹದಾಹ್ವಯಲಿಂಗಸೇವಾಂ
ಕುರ್ವನ್ಸ್ಮೇನಸ್ಯಹರಹರ್ಮನನ ಪ್ರಬೋಧಾತ್
ಐಕ್ಯಸ್ಥಲೇ ಮಹಿತಸಂಭೃತಸಾಮರಸ್ಯೇ ಜಾಪ್ಯಂ ಜಪತ್ಯನುಪಮಂ
ಮಹನೀಯಮಂತ್ರಂ ೪೯

ಯತ್ರಮರುತ್ತತ್ರ ಮನೋ ಯತ್ರ ಮನಸ್ತತ್ರ ಚ ಮರುದುಪಯೋಗಃ
ಅತ್ರ ಷಡಕ್ಷರಪವನಂ ಕೃತ್ವಾ ಪ್ರೀತ್ಯೈವ ಷಟ್‌ಸ್ಥಲೀ ಜಪತಿ ೫೦

---

ಸೂ ೪೮. ಕರ್ಣೇಂದ್ರಿಯವೇ ಮುಖವಾಗುಳ್ಳ ಶರಣಸ್ಥಲದಲ್ಲಿದ್ದು, ಭಕ್ತನು ಮಂತ್ರೋಚ್ಚಾರಣದಿಂದ ಜನಿಸುವ ಶಬ್ದಾಮೃತಮಯ ಜಪಕ್ರಿಯೆಯಿಂದುಂಟಾದ ಪೂರ್ಣಾನಂದವುಳ್ಳವನಾಗಿ ಪ್ರಸಾದಘನಲಿಂಗವನು ಭಜಿಸುತ್ತಿರುವನು.

ಸೂ. ೪೯. ಮಂತ್ರಾರ್ಥರೂಪವಾದ ಮಹಾಲಿಂಗದ ಸೇವೆಯನ್ನು ಮಾಡುತ್ತ, ಭಕ್ತನು ಪೂರ್ಣಸಾಮರಸ್ಯದಿಂದ ಕೂಡಿದ ಐಕ್ಯಸ್ಥಲದಲ್ಲಿದ್ದು, ಜಪಿಸಲು ಯೋಗ್ಯವಾದ ನಿರುಪಮ ಷಡಕ್ಷರಮಹಾಮಂತ್ರವನ್ನು ಜಪಿಸುತ್ತಿರುವನು.

ಸೂ. ೫೦. ಎಲ್ಲಿ ಶ್ವಾಸೋಚ್ಛ್ವಾಸರೂಪವಾದ ವಾಯುವಿರುವುದೋ ಅಲ್ಲಿ ಮನವಿರುವುದು. ಎಲ್ಲಿ ಮನವಿರುವುದೋ ಅಲ್ಲಿ ಶ್ವಾಸೋಚ್ಛ್ವಾಸದುಪಯೋಗವಿರುವುದು. ಆದುದರಿಂದ ಷಡಕ್ಷರಮಂತ್ರವನ್ನೇ ಪವನವನ್ನಾಗಿ ಮಾಡಿಕೊಂಡು ಷಟ್‌ಸ್ಥಲಜ್ಞನು ಮಂತ್ರಜಪವನ್ನು ಮಾಡುವನು. (ಮನಸ್ಸೂ ಮಾರುತವೂ ಕೂಡಿರುವಂತೆ ಮನಸ್ಸೂ ಮಂತ್ರರೂಪಪವನವೂ ಕೂಡಿರಬೇಕೆಂದು ತಾತ್ಪರ್ಯ).

ಚಿತ್ತಾಂಶಾಧರಸೇವನಂ ಜಪವಿಧಾವಾಲಿಂಗನಂ ಗಾಢತಾ
ಬಂಧಃ ಪಾಣಿಹತಕ್ಷತಂ ಗಣನರೈಖೈರ್ವಾಕ್ಯವಿಕ್ಷೇಪಣಂ
ಸಂರಂಭಃ ಸುರತಕ್ರಿಯಾ ಸಮುಚಿತಾ ಶಯ್ಯಾ ಹಿ ಪದ್ಮಾಸನಂ
ಸಲ್ಲಾಪಃ ಶಸಕ್ಯೈರುದೀರಿತಮನುಃ ಪಂಚಾಕ್ಷರೀಸಂಗಮೇ ೫೧

ರಮತೇ ಮಾಮಹೋರಾತ್ರಂ ಪರಾವಿದ್ಯಾ ಪರಾಂಗನಾ
ನಾವಕಾಶೋ ಮಯಾ ರಂತುಂ ತವ ಮಾಯೇ ಪರಾಂಗನೇ ೫೨

ಏವಂ ಜಪರತಿಕ್ರೀಡಾಸಮಾಧೌ ಪರಯಾ ಸಹ
ವಿದ್ಯಯಾ ರಮತೇ ನಿತ್ಯಂ ಮಾಯಾಂ ಹೇಯಾಂ ಶ್ವವದ್ರಹೇತ್ ೫೩

ಇತ್ಯನೇನ ನಿರುಕ್ತೇನ ವೀರಮಾಹೇಶ್ವರಂ ಮತಂ
ಜಪಂ ಷಟ್ಶತಸಾಹಸ್ರಂ ತತಃ ಷಷ್ಟಿಸಹಸ್ರಕಂ ೫೪

---

### ಜಪವಿಧಿಯಲ್ಲಾಗುವ ಸಾಮರಸ್ಯಸುಖ

ಸೂ. ೫೧, ೫೨, ೫೩. ಜಪವಿಧಿಯಲ್ಲಿ ಪ್ರಾಪ್ತವಾಗುವ ಪಂಚಾಕ್ಷರೀ ಸಂಗಮದಲ್ಲಿ ಪಂಚಾಕ್ಷರೀವಿದ್ಯೆಯೆಂಬ ಚಿದಂಗನೆಯ ಅಧರಚುಂಬನವೂ, ಆಲಿಂಗನವೂ, ಗಾಢಬಂಧವೂ ಉಂಟಾಗುವವು. ಜಪಕಾಲದ ಗಣನರೇಖೆ ಯಿಂದುಂಟಾಗುವ ಮಂತ್ರವಾಕ್ಯಗಣನೆಯು ನಖಕ್ಷತದಂತಿರುವುದು. ಜಪಸಂರಂಭವು ಸುರತಕ್ರಿಯೆಯಾಗಿರುವುದು. ಪದ್ಮಾಸನವು ಸಮುಚಿತ-ವಾದ ಶಯ್ಯೆಯೆನಿಸುವುದು. ಮೆಲ್ಲಗೆ ಉಚ್ಚರಿಸುವ ಮಂತ್ರವು ಸರಸ-ಸಲ್ಲಾಪವಾಗಿರುವುದು (೫೧). ಹೀಗೆ ಪರವಿದ್ಯೆಯೆನಿಸಿದ ಶ್ರೇಷ್ಠಾಂಗನೆಯು ಹಗಲಿರುಳು ನನ್ನೊಡನೆ ರಮಿಸುತ್ತಿರುವಳು. ಆದುದರಿಂದ, ಅನ್ಯಾಂಗನೆ ಯಾದ ಮಾಯೆಯೆ, ನಿನ್ನೊಡನೆ ರಮಿಸಲು ನನಗೆ ಅವಕಾಶವಿಲ್ಲ (೫೨). ಹೀಗೆ ಷಟ್ಸ್ಥಲಜ್ಞನು ಜಪರತಿಕ್ರೀಡಾಸಮಾಧಿಯಲ್ಲಿ ಪರವಿದ್ಯೆಯೊಡನೆ ನಿತ್ಯವೂ ರಮಿಸುತ್ತ, ಹೇಯವಾದ ಮಾಯೆಯನ್ನು ಶ್ವಾನವನ್ನು ತ್ಯಜಿಸು-ವಂತೆ ತ್ಯಜಿಸಬೇಕು (೫೩).

ಸೂ. ೫೪. “ಮಾಯಾಂ ಹೇಯಾಂ ಶ್ವವದ್ರಹೇತ್” ಎಂಬ ವಾಕ್ಯದ ನಿರ್ವಚನದಿಂದ ವೀರಮಾಹೇಶ್ವರನೆಂಬುದರರ್ಥವು ಸಮ್ಮತವಾಗಿರುವುದು.

ತರ್ಪಯಿತ್ವಾ ಷಟ್‌ಸಹಸ್ರಂ ಹುತ್ವಾ ಚಾಗ್ನೌ ಶಿವಾತ್ಮಕೇ
ಷಟ್‌ಶತಂ ಭೋಜಯಿತ್ವಾ ತು ಶೈವಾನಾಂ ಷಟ್‌ಸ್ಥಲಾತ್ಮನಾಂ ೫೫

ಷಷ್ಟಿಂ ವಾ ಶಕ್ತಿತಃ ಷಡ್ವಾ ಮಹಾಂತಂಚೈಕಮೇವ ವಾ
ಷಡಂಗಲಿಂಗಸಂಯುಕ್ತಂ ಷಟ್‌ಸ್ಥಲಬ್ರಹ್ಮರೂಪಿಣಂ ೫೬

ಪೂಜಯೇತ್ ಸ್ವರ್ಣವಸ್ತ್ರಾಲಂಕಾರಮುಖ್ಯಾನುಲೇಪನೈಃ
ಬಹುನೋಕ್ತೇನ ಕಿಂ ಭಕ್ತ್ಯಾ ಪರಯಾ ಸ್ಥಿರಯಾ ಸಹ ೫೭

ಜಪೇ ಚ ತರ್ಪಣೇ ಹೋಮೇ ಭೋಜನೇ ಪೂಜನೇಽಪಿ ಚ
ಯಥಾಕಾಲಂ ಯಥಾಶಕ್ತಿ ಯಥಾಪ್ರೀತಿ ಯಥಾವಿಧಿ ೫೮

ಯಥೋಚಿತಂ ಕೃತಂ ಯತ್ತತ್ ಸಂಪೂರ್ಣಂ ಸಫಲಂ ಶಿವೇ
ಅತೋ ಜಪವಿಧೇರೂರ್ಧ್ವಂ ಸಿದ್ಧಿಂ ಸಂಚಿತಯೇನ್ಮನೋಃ ೫೯

---

ಪುರಶ್ಚರಣದ ಅಂಗವಾಗಿರುವ ಜಪ-ತರ್ಪಣ-ಹೋಮ-
ಭೋಜನ-ಪೂಜನಗಳ ಸ್ವರೂಪ

ಸೂ. ೫೪ ರಿಂದ ೫೯. ಆರುನೂರುಸಾವಿರ (ಆರು ಲಕ್ಷ) ಜಪವೂ ಅರವತ್ತುಸಾವಿರ ತರ್ಪಣವೂ ಉಕ್ತವಾಗಿರುವುದು (೫೪). ಶಿವಾಗ್ನಿಯಲ್ಲಿ ಆರುಸಾವಿರದ ಹವನವು (ಉಕ್ತವಾಗಿದೆ) ಷಟ್‌ಸ್ಥಲಜ್ಞರಾದ ಆರುನೂರು ಜನ ಶಿವಭಕ್ತರಿಗೆ ಭೋಜನವನ್ನು ಮಾಡಿಸಬೇಕು (೫೫). ಸ್ವಶಕ್ತಿಗನುಸರಿಸಿ, ಅರವತ್ತು ಜನರನ್ನಾಗಲಿ ಅಥವಾ ಆರು ಜನರನ್ನಾಗಲಿ ಇಲ್ಲವೆ, ಷಡಂಗಲಿಂಗಯುಕ್ತನೂ ಷಟ್‌ಸ್ಥಲಬ್ರಹ್ಮರೂಪನೂ ಆದ ಒಬ್ಬ ಮಹಾತ್ಮನನ್ನಾಗಲಿ (೫೬) ಸ್ವರ್ಣವಸ್ತ್ರಾಲಂಕಾರಾನುಲೇಪನಾದಿಗಳಿಂದ ಪೂಜಿಸಬೇಕು. ಬಹೂಕ್ತಿಯಿಂದೇನು ಪ್ರಯೋಜನ? ಸ್ಥಿರವಾದ ಶ್ರೇಷ್ಠ ಭಕ್ತಿಯೊಡನೆ (೫೭) ಜಪ, ತರ್ಪಣ, ಹೋಮ, ಭೋಜನ, ಪೂಜನ ಇವುಗಳ ವಿಷಯದಲ್ಲಿ ಕಾಲ-ಶಕ್ತಿ-ಪ್ರೀತಿಗಳಿಗನುಸರಿಸಿ, ವಿಧ್ಯುಕ್ತವಾಗಿ (೫೮) ಉಚಿತರೀತಿಯಿಂದ ಯಾವ ಜಪವಿಧಿಯು ಮಾಡಲ್ಪಡುವುದೋ, ಅದು ಶಿವನಲ್ಲಿ ಅರ್ಪಿತವಾಗಿ ಸಂಪೂರ್ಣಸಫಲಪ್ರದವಾಗುವುದು. ಹೀಗೆ ಜಪವಿಧಿಯನ್ನು ಮುಗಿಸಿ ಮುಂದೆ ಮಂತ್ರಸಿದ್ಧಿಯ ಚಿಂತನವನ್ನು ಮಾಡಬೇಕು (೫೯).

ಸಿದ್ಧಸುದಿವ್ಯಷಡಕ್ಷರಮಂತ್ರೋಽಹಂ ಗುರುಕೃಪಾಬಲಾದಸ್ಮಿ
ತತ್ಸರ್ವಮನುಷ್ಠಾನಂ ಕೃತಾಕೃತಂ ಗುರುಪದಾರ್ಪಿತಂ ಚಾಸ್ತು ೬೦

ಷಟ್‌ಷಟ್‌ಸಂಖ್ಯಾಕಾಯೇ ಷಡೂರ್ಮಿ ಷಡ್ಭಾವ ಷಡರಿವರ್ಗಾದ್ಯಾಃ
ಷಟ್‌ಸ್ಥಲರೂಪ ಷಡಕ್ಷರರುದ್ರಾಗ್ನೌ ಭಸ್ಮಸಾತ್ಕೃತಾಃ ಸಂತು ೬೧

ಅಯಂ ಷಟ್‌ಕೌಶಿಕೋ ದೇಹಃ ಷಟ್‌ಸ್ಥಲಬ್ರಹ್ಮತೇಜಸಿ
ಷಡಕ್ಷರಪ್ರಭಾವೇಣ ವಿಲೀನೋಽಸ್ತು ಮಮ ಪ್ರಭೋ ೬೨

ಪಂಚಾಕ್ಷರಾಮೃತರಸಾಯನಕಲ್ಪಸೇವಾಂ ಪಂಚಾನನ
ತ್ವದುಪದೇಶವಿಧಾನಲಬ್ಧಾಂ
ಪಂಚತ್ವಜನ್ಮಮರಣಾದಿನಿವಾರಣಾಯ ಪಂಚಾರ್ಥಸಿದ್ಧಿ
ಘಟನಾಯ ಮಮೇಹ ಕುರ್ವೇ ೬೩

---

## ಮಂತ್ರಸಿದ್ಧಿಚಿಂತನಕ್ರಮ

ಸೂ. ೬೦ ರಿಂದ ೬೪. ನಾನು ಮಾಡಿದ, ಮಾಡದೆಯೇ ಉಳಿದ ಮಂತ್ರಾನುಷ್ಠಾನವೆಲ್ಲವೂ ಗುರುಪಾದಾರ್ಪಿತವಾಗಿರಲಿ. ಗುರುಕೃಪಾ-ಬಲದಿಂದ ನಾನಂತೂ ಸಿದ್ಧವಾದ ದಿವ್ಯ ಷಡಕ್ಷರಮಂತ್ರದ ಸ್ವರೂಪನಾಗಿರು-ವೆನು (೬೦). ನನ್ನಲ್ಲಿ ಆರಾರು ಸಂಖ್ಯೆಯಿಂದಿರುವ ಷಡೂರ್ಮಿಗಳೂ ಷಡ್ಭಾವವಿಕಾರಗಳೂ ಷಡರಿವರ್ಗವೇ ಮೊದಲಾದವುಗಳು ಷಟ್‌ಸ್ಥಲ-ರೂಪಷಡಕ್ಷರರುದ್ರಾಗ್ನಿಯಲ್ಲಿ ಭಸ್ಮವಾಗಿ ಹೋಗಲಿ (೬೧). ಪ್ರಭುವೆ, ಭೂಮ್ಯಾದಿಷಡಂಗಗಳಿಂದ ಕೂಡಿದ ನನ್ನ ದೇಹವು ಷಡಕ್ಷರಪ್ರಭಾವದಿಂದ ಷಟ್‌ಸ್ಥಲಬ್ರಹ್ಮತೇಜಸ್ಸಿನಲ್ಲಿ ಮುಳಿಗಿರಲಿ (೬೨). ಪಂಚಮುಖನಾದ ಶಿವನೆ, ನಿನ್ನ ಜನನ-ಮರಣಾದಿ ಪಂಚಕನಿವಾರಣಾರ್ಥವಾಗಿ ಮತ್ತು ಪಂಚಪುರುಷಾರ್ಥಸಿದ್ಧಿಯ ಪ್ರಾಪ್ತಿಗಾಗಿ ನಿನ್ನ ಉಪದೇಶವಿಧಾನದಿಂದ ಪ್ರಾಪ್ತವಾದ ಪಂಚಾಕ್ಷರಮಂತ್ರದ ಅಮೃತರಸಾಯನ ಸಮಾನವಾದ ಸೇವೆಯನ್ನು ಇಹದಲ್ಲಿ ಮಾಡುತ್ತಿರುವೆನು (೬೩). ಶಿವನಿಗೆ ನಮಸ್ಕಾರ ವೆಂದು ಶಿವನನ್ನೇ ಆಶ್ರಯಿಸುವೆನು. ಶಿವನೇ ಪ್ರಸನ್ನನಾಗೆಂದು ಶಿವನನ್ನೇ ಆಶ್ರಯಿಸುವೆನು. ಶಿವನಿಗಿಂತಲೂ ಬೇರಾವುದೂ ಶ್ರೇಷ್ಠವಿಲ್ಲವೆಂದು

ನಮಃ ಶಿವಾಯೇತಿ ಶಿವಂ ಪ್ರಪದ್ಯೇ ಶಿವ ಪ್ರಸಿದೇತಿ ಶಿವಂ ಪ್ರಪದ್ಯೇ
ಶಿವಾತ್ಪರಂ ನೇತಿ ಶಿವಂ ಪ್ರಪದ್ಯೇ ಶಿವೋಽಹಮಸ್ಮೀತಿ ಶಿವಂ ಪ್ರಪದ್ಯೇ ೬೪

ಏವಂ ಸಮಾಪ್ಯ ವಿಧಿವಜ್ಜಪಯಜ್ಞಮತಃ ಪರಂ
ಸ್ಥಲದ್ವಯಾಚ್ಚ ಪೂರ್ವೋಕ್ತಾಚ್ಛೇಷಂ ಸರ್ವಂ ಸಮಾಚರೇತ್ ೬೫

ಇತ್ಯೇತತ್ ಷಟ್‌ಸ್ಥಲಬ್ರಹ್ಮಪುರಶ್ಚರಣಮುತ್ತಮಂ
ಸಮಾಸಾದೇವ ಕಥಿತಂ ಶಿವಸಿದ್ಧಾಂತತಂತ್ರಜಂ ೬೬

ಶಿಷ್ಯ :

ಗುಣಾತೀತರುಚಿವ್ಯಾಪ್ತಪರಮಾನಂದದ ಪ್ರಭೋ
ಗುರೋ ಗುರುಪದಾರ್ಥೈಕಸ್ವಸಂವೇದ್ಯ ನಮೋಽಸ್ತು ತೇ ೬೭

---

ಶಿವನನ್ನೇ ಆಶ್ರಯಿಸುವೆನು. ನಾನು ಶಿವಸ್ವರೂಪನಿರುವೆನೆಂದೂ ಶಿವನನ್ನೇ ಆಶ್ರಯಿಸುವೆನು (೬೪).

ಸೂ. ೬೫. ಈ ಪ್ರಕಾರವಾಗಿ ವಿಧಿಗನುಸರಿಸಿದ ಜಪಯಜ್ಞವನ್ನು ಮುಗಿಸಿದ ಮೇಲೆ ಪೂರ್ವೋಕ್ತವಾದ ಸ್ಥಲದ್ವಯದ ಉಳಿದ ಕ್ರಿಯೆಯನ್ನು ಆಚರಿಸಬೇಕು.

ಸೂ. ೬೬. ಹೀಗೆ ಶಿವಸಿದ್ಧಾಂತತಂತ್ರದಲ್ಲಿ ಉಕ್ತವಾಗಿರುವ ಈ ಉತ್ತಮವಾದ ಷಟ್‌ಸ್ಥಲಬ್ರಹ್ಮಪುರಶ್ಚರಣವು ಸಂಗ್ರಹವಾಗಿ ಕಥಿತವಾಗಿರುವುದು.

ಶಿಷ್ಯ. ಸೂ. ೬೭. ಸತ್ವಾದಿಗುಣರಹಿತವಾದ ಷಟ್‌ಸ್ಥಲಾಭಿರುಚಿಯಿಂದ ತುಂಬಿದ ಪರಮಾನಂದವನ್ನುಂಟುಮಾಡುವ ಪ್ರಭುವೆ, ಮತ್ತು ಸ್ವಸಂವೇದ್ಯವಾದ ಗುರುಪದಾರ್ಥದ ಮುಖ್ಯಸ್ವರೂಪವುಳ್ಳ ಗುರುವೆ, ನಿನಗೆ ನಮಸ್ಕಾರ.

ವಿಚಾರ :

ಈ ಅಧಿಕರಣದಲ್ಲಿ ಉಕ್ತವಾದ ಷಟ್‌ಸ್ಥಲಬ್ರಹ್ಮವಾಚಕವಾದ ಷಡಕ್ಷರ-ಮಂತ್ರದ ಪುರಶ್ಚರಣದ ಮುಖ್ಯ ವಿಷಯವು ಹೀಗಿದೆ :

ಮಂತ್ರಜಪವಿಧಿಗಳಲ್ಲಿ "ಗುರುವು ಯಾವ ಮಂತ್ರವನ್ನೇ ಉಪದೇಶಿಸಿರಲಿ; ಆ ಮಂತ್ರದ ಜಪವನ್ನು ಪ್ರತಿದಿನವೂ ಮಾಡಬೇಕಾದರೆ ಮೊದಲು ಮಂತ್ರ ಸಿದ್ಧಿಯನ್ನು ಪುರಶ್ಚರಣಪೂರ್ವಕವಾಗಿ ಮಾಡಿಕೊಳ್ಳಬೇಕೆ"ಂಬ ನಿಯಮ ವಿರುವುದುಂಟು. ಆ ನಿಯಮಕ್ಕನುಸರಿಸಿ, ಸೂತ್ರಕಾರನು ಷಡಕ್ಷರ ಮಂತ್ರದ ಪುರಶ್ಚರಣಕ್ರಮವನ್ನು ಈ ಅಧಿಕರಣದಲ್ಲಿ ಹೇಳಿರುವನು. ಪುರಶ್ಚರಣವಿಷಯದಲ್ಲಿ ಪುರಃ = ಅಗ್ರತಃ, ಚರಣಂ = ಮಂತ್ರಜಪಾದಿ ಪಂಚಾಂಗಕರ್ಮಾಚರಣಂ = ಇತಿ-ಪುರಶ್ಚರಣಂ-ಎಂದು ತಂತ್ರಸಾರದಲ್ಲಿ ಉಕ್ತವಾಗಿರುವುದು. ಎಂದರೆ, ಮಂತ್ರಜಪಕ್ಕೆ ಮೊದಲು ಜಪ, ತರ್ಪಣ ಹೋಮ ಭೋಜನ, ಪೂಜನಗಳೆಂಬ ಪಂಚಾಂಗಗಳಿಂದ ಕೂಡಿದ ಆಚರಣೆಯು ಪುರಶ್ಚರಣವೆನಿಸುವುದೆಂದು ತಂತ್ರಸಾರೋಕ್ತಿಯ ಅರ್ಥ-ವಿರುವುದು. ಆದುದರಿಂದ ಸೂತ್ರಕಾರನು ಷಡಕ್ಷರಮಂತ್ರಸಿದ್ಧಿಗೆ ಮಾಡಬೇಕಾದ ಪುರಶ್ಚರಣದಲ್ಲಿಯೂ ಜಪ, ತರ್ಪಣ, ಹೋಮ, ಭೋಜನ, ಪೂಜೆ - ಇವುಗಳ ಸ್ವರೂಪವನ್ನು ಪ್ರತಿಪಾದಿಸಿರುವನು. ಆದರೆ, ಗುರೂಪದಿಷ್ಟಮಂತ್ರಕ್ಕೆ ಪುರಶ್ಚರಣಪೂರ್ವಕವಾದ ಸಿದ್ಧಿಯು ಬೇಕಾ-ಗುವುದೆ ? ಎಂಬ ಶಂಕೆಯೂ ಕೆಲವರಲ್ಲಿರುವುದು. ಈ ಶಂಕೆಗೆ ಸಮಾ-ಧಾನವು ಹೀಗಿರುವುದು:—ಮಂತ್ರಸಿದ್ಧನಾದವನು ಪುರಶ್ಚರಣದಿಂದ ಸಿದ್ಧ ವಾದ ಮಂತ್ರದ ಶಕ್ತಿಯಿಂದ, ತನ್ನನ್ನಾಶ್ರಯಿಸಿದವರ ರೋಗಾದಿಪರಿಹಾರ ವನ್ನು ಮಾಡಿ, ಅವರಿಷ್ಟಾರ್ಥವನ್ನು ಕೊಡಲು ಸಮರ್ಥನಾಗುವನು. ಇಷ್ಟೇ ಅಲ್ಲ, ಮಂತ್ರಸಿದ್ಧನು ತನ್ನ ಮಂತ್ರದ ಸಹಾಯದಿಂದ ತನಗೆ ಬೇಕಾದ ಸಿದ್ಧಿಯನ್ನು ಪಡೆದುಕೊಳ್ಳಬಹುದೆಂದು ಮಂತ್ರಜ್ಞರು ಸಮಾ-ಧಾನ ಹೇಳುವರು. ಈ ಸಮಾಧಾನವನ್ನು ಒಪ್ಪದವರು - ಗುರೂಪದಿಷ್ಟ-ವಾದ ಮಂತ್ರವನ್ನು ಪುರಶ್ಚರಣರಹಿತವಾಗಿ ಜಪಿಸಬಹುದು. ಜಪಸಿದ್ಧಿಗೆ ಮಂತ್ರಾರ್ಥಮೂರ್ತಿಯಲ್ಲಿಟ್ಟ ಭಕ್ತಿಯೇ ಕಾರಣವೆಂದು ಹೇಳುವರು. ಇವರ ಹೇಳಿಕೆಗನುಸರಿಸಿ, ಪುರಶ್ಚರಣರಹಿತವಾದ ಮಂತ್ರೋಪದೇಶವೇ ಮಠಗಳಲ್ಲಿ ರೂಢವಾಗಿರುವುದು. ಪುರಶ್ಚರಣಕ್ರಮವು ವೈಯಕ್ತಿಕವಾಗಿ ಐಚ್ಛಿಕವಾಗಿದ್ದಂತೆ ತೋರುವುದು. ಹೀಗೆ ಪುರಶ್ಚರಣವಿಧಿಯಲ್ಲಿ ಭಿನ್ನಾಭಿ-ಪ್ರಾಯವಿರುವುದು.

ಸೂತ್ರಕಾರನು ಪುರಶ್ಚರಣಕ್ರಮವನ್ನಲ್ಲದೆ, ಮಂತ್ರಜಪಕ್ರಮವನ್ನು ಷಟ್-ಸ್ಥಲಕ್ಕನುಸರಿಸಿ ವಿವರಿಸಿರುವುದು ಮುಖ್ಯವಾಗಿರುವುದು. ವೀರಶೈವರು

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೬೮

ಇತಿ ಶ್ರೀಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ಷಟ್‌ಸ್ಥಲಬ್ರಹ್ಮ ಪುರಶ್ಚರಣಂ ನಾಮ
ಚತುರ್ಥಾಧಿಕರಣಂ
ಸಂಪೂರ್ಣಂ

---

ಮಂತ್ರವನ್ನು ಷಟ್‌ಸ್ಥಲಕ್ಕೆ ಅನುಗುಣವಾಗಿಯೇ ಜಪಿಸಬೇಕಾದುದರಿಂದ ಆ ಕ್ರಮವು ಈ ಅಧಿಕರಣದಲ್ಲಿ ವಿಸ್ತಾರವಾಗಿ ನಿರೂಪಿತವಾಗಿದೆ. ಮತ್ತು ಮಂತ್ರಜಪಕ್ಕೆ ಪೂರ್ವದಲ್ಲಿ ಮಾಡಬೇಕಾದ ನ್ಯಾಸಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಷಟ್‌ಸ್ಥಲಕ್ಕನುಸರಿಸಿ ಸೂತ್ರಕಾರನು ತಾನೇ ವಿವರಿಸಿರುವನು. ಈಗ ರೂಢಿಯಲ್ಲಿರುವ ಶಿವಪೂಜಾವಿಧಿಗಳ ನ್ಯಾಸಮಂತ್ರಗಳಿಗಿಂತಲೂ ಸೂತ್ರಕಾರನ ನ್ಯಾಸಮಂತ್ರಗಳು ಭಿನ್ನವಾಗಿರುವವು. ಷಟ್‌ಸ್ಥಲಕ್ಕನುಸರಿಸಿದ ನ್ಯಾಸಕ್ರಮದಲ್ಲಿ ಸೂತ್ರಕಾರನ ನ್ಯಾಸಮಂತ್ರಗಳನ್ನುಪಯೋಗಿಸುವುದೇ ಸಮುಚಿತವೆಂದು ಮಂತ್ರತತ್ತ್ವಜ್ಞರಭಿಪ್ರಾಯವಿರುವುದು. ಇನ್ನು ಮಂತ್ರಾಂಗಗಳಾದ ಋಷಿ, ಛಂದಸ್ಸು, ಮಂತ್ರದೇವತೆ, ಮಂತ್ರಬೀಜ, ಮಂತ್ರಶಕ್ತಿ, ಮಂತ್ರಕೀಲಕಗಳೆಂಬ ಷಡಂಗಗಳಲ್ಲಿ ಸೂತ್ರಕಾರನು ಹೇಳುವ ಕ್ರಮವು ಭಿನ್ನವಾಗಿರುವುದು. ಷಡಕ್ಷರಮಂತ್ರದ ಷಡಂಗಗಳನ್ನು ವಿವರಿಸುವ ಅನೇಕ ಗ್ರಂಥಗಳಲ್ಲಿ ಆ ವಿವರಣೆಯು ಹೀಗಿರುವುದು :

ಷಡಕ್ಷರಮಂತ್ರಕ್ಕೆ ವಾಮದೇವನು ಋಷಿ, (ಮಂತ್ರದ್ರಷ್ಟೃ) ಪಂಕ್ತಿ ಛಂದಸ್ಸು, ಸದಾಶಿವನು ದೇವತೆ, (ಮಂತ್ರಾರ್ಥಮೂರ್ತಿ) ಓಂ ಬೀಜವು, (ಓಂ ಎಂಬ ಬೀಜಾಕ್ಷರದಿಂದ ಮಂತ್ರೋತ್ಪತ್ತಿ) ಉಮೆಯು ಶಕ್ತಿಯು, (ಮಂತ್ರಾರ್ಥರೂಪನಾದ ಶಿವನೊಡನೆ ಅವಿನಾಭಾವದಿಂದಿರುವ ಮಂತ್ರಶಕ್ತಿ) ಶಿವ ಇತಿ ಕೀಲಕಂ (ಮಂತ್ರಶಕ್ತಿವರ್ಧಕ).

ಸೂತ್ರಕಾರನು ಹೇಳಿರುವ ಮಂತ್ರಾಂಗಗಳ ವಿಷಯಕ್ಕಿರುವ ಪ್ರಮಾಣವನ್ನು ಪರಿಶೋಧಿಸಬೇಕಾಗಿದೆ.

ಸೂ. ೬೮. ಪರಾನುಭವ ಸೂತ್ರೋಕ್ತವಾಗಿರುವ ಪರಮಾರ್ಥಪದ-

ವಾಗಿರುವ ಈ ವಿಷಯವನ್ನು ಯಾವಾತನು ತಿಳಿದು ಆಚರಿಸುವನೋ, ಆತನೇ ಆಚಾರ್ಯಶ್ರೇಷ್ಠನಾಗಿ ವಿಭುವೆನಿಸುವನು.

ಇಂತು ಶ್ರೀ ಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ಷಟ್‌ಸ್ಥಲಬ್ರಹ್ಮಪುರಶ್ಚರಣನಾಮಕ
ಚತುರ್ಥಾಧಿಕರಣಂ
ಸಂಪೂರ್ಣಂ

॥ ಶ್ರೀಗುರುಲಿಂಗಜಂಗಮೇಭ್ಯೋ ನಮಃ ॥

# ಪಂಚಮಾಧಿಕರಣೇ ದೇಹಾವಸಾನಂ

ಗುರು :

ಅಥಾತಃ ಷಟ್‌ಸ್ಥಲಬ್ರಹ್ಮವರ್ಚಸಾಂ ಶಿವಯೋಗಿನಾಂ
ದೇಹಾವಸಾನಂ ತತ್ಕೃತ್ಯಂ ಪ್ರವಕ್ಷ್ಯಾಮಿ ವಿಶೇಷತಃ ೧

ಷಡಂಗಲಿಂಗಸಂಯುಕ್ತಷಟ್‌ಸ್ಥಲಬ್ರಹ್ಮರೂಪಿಣಾಂ
ನೈವಾವಸಾನೋ ದೇಹಸ್ಯ ಪ್ರಾಕೃತಾನಾಮಿವಾತ್ಮನಾಂ ೨

---

## ಪಂಚಮಾಧಿಕರಣದಲ್ಲಿ ದೇಹಾವಸಾನಂ

ಗುರು. ಸೂ. ೧. ಷಟ್‌ಸ್ಥಲಬ್ರಹ್ಮಪುರಶ್ಚರಣನಿರೂಪಣಾನಂತರದಲ್ಲಿ ಷಟ್‌ಸ್ಥಲಬ್ರಹ್ಮತೇಜಸ್ಸುಳ್ಳ ಶಿವಯೋಗಿಗಳ ದೇಹಾವಸಾನ (ಲಿಂಗೈಕ್ಯ) ಸ್ಥಿತಿಯನ್ನೂ ಆಗ ಮಾಡುವ ಕೃತ್ಯವನ್ನೂ ವಿಶೇಷರೀತಿಯಿಂದ ಹೇಳುವೆನು.

ಸೂ. ೨, ೩. ಪ್ರಾಕೃತಾತ್ಮರಿಗೆ (ಭೌತಿಕಶರೀರಿಗಳಿಗೆ) ದೇಹಾವಸಾನ (ಮರಣ)ವಿರುವಂತೆ ಷಡಂಗಲಿಂಗಸಂಯುಕ್ತರಾದ ಷಟ್‌ಸ್ಥಲಬ್ರಹ್ಮರೂಪಿಗಳಿಗೆ ದೇಹಾವಸಾನವಿರುವುದಿಲ್ಲ (೨). ಏಕೆಂದರೆ -ಷಟ್‌ಸ್ಥಲಬ್ರಹ್ಮರೂಪಿಗಳ ದೇಹಗತವಾದ ಪೃಥ್ವ್ಯಾದಿಪಂಚಭೂತಗಳು ಪಂಚಾಕ್ಷರ

ಪಂಚಾಕ್ಷರಂ ಪಂಚಭೂತಂ ಭೂತಾತ್ಮಾ ಪ್ರಣವಃ ಪುಮಾನ್
ಭೂತಭೂತಾತ್ಮಭಾವೇನ ಸ್ಥೂಲದೇಹಃ ಪ್ರತೀಯತೇ ೩

ಶಿಷ್ಯ :

ಸೂಕ್ಷ್ಮದೇಹಃ ಸ್ವಯಂ ಲಿಂಗಂ ಯೋಗಿನಾಂ ಷಟ್‌ಸ್ಥಲಾತ್ಮನಾಂ
ಆಚಾರಾದ್ಯಾತ್ಮಕೋ ದೇಹೋ ನ ಪೃಥ್ವ್ಯಾದ್ಯಾತ್ಮಕೋ ಮತಃ
ಕಥಮಸ್ಯಾವಸಾನಂ ಸ್ಯಾದ್ಭೌತಿಕಸ್ಯೇವ ದೇಹಿನಃ ೪

ಗುರು :

ಆಚಾರಃ ಸ್ಯಾತ್ ಪೃಥ್ವೀ ಗುರುರಾಪಃ ಶಿವ ಉದೀರ್ಯತೇ ತೇಜಃ
ಚರ ಏವ ಸ್ಯಾದ್ವಾಯುಃ ಪ್ರಸಾದ ಆಕಾಶ ಇತ್ಯುದಾಹ್ರಿಯತೇ ೫

---

ಸ್ವರೂಪವಾಗಿರುವವು. ಪಂಚಾಕ್ಷರಸ್ವರೂಪವಾದ ಪಂಚಭೂತಶರೀರವುಳ್ಳ ಜೀವಾತ್ಮನು ಓಂಕಾರಪ್ರಣವಸ್ವರೂಪನಾಗಿರುವನು. ಹೀಗೆ ಸ್ಥೂಲದೇಹವು ಮಂತ್ರಾತ್ಮವಾದ ಭೂತಭೂತಾತ್ಮ (ಭೌತಿಕಶರೀರಿ)ಭಾವನೆಯಿಂದ ತೋರುವುದು (೩).

ಶಿಷ್ಯ ಸೂ. ೪. ಸ್ವಾಮಿ, ಷಟ್‌ಸ್ಥಲಸ್ವರೂಪರಾದ ಯೋಗಿಗಳ ಸೂಕ್ಷ್ಮದೇಹವು ಸ್ವತಃಲಿಂಗರೂಪವಾಗಿಉವುದು. ಇನ್ನು ಸ್ಥೂಲದೇಹವು ಆಚಾರಾದಿಲಿಂಗಸ್ವರೂಪವಾಗಿರುವುದು. ಪೃಥ್ವ್ಯಾದಿಪಂಚಭೂತರೂಪವಾಗಿರುವುದಿಲ್ಲ. ಹೀಗೆ ಲಿಂಗಸ್ವರೂಪವಾದ ಸ್ಥೂಲದೇಹಕ್ಕೆ ಭೌತಿಕದೇಹಿಯ ದೇಹಕ್ಕಾಗುವಂತೆ-ಅವಸಾನವು-ಹೇಗೆ ಪ್ರಾಪ್ತವಾಗುವುದು ?

ಭೌತಿಕಶರೀರವೇ ಲಿಂಗಸ್ವರೂಪವೆಂಬುದನ್ನು ಗುರುವು ವಿವರಿಸುವನು.

ಗುರು. ಸೂ. ೫, ೬. ಪೃಥ್ವಿಯೇ ಆಚಾರಲಿಂಗವು. ಜಲವು ಗುರುಲಿಂಗವು. ಅಗ್ನಿಯು ಶಿವಲಿಂಗವು. ವಾಯು ಚರಲಿಂಗವು. ಆಕಾಶವು ಪ್ರಸಾದಲಿಂಗವು (೫). ಜೀವಾತ್ಮನೇ ಮಹಾಲಿಂಗವು. ಹೀಗೆ ಷಟ್‌ಸ್ಥಲ

ಜೀವೋ ಮಹಾನಸೌ ಸ್ಯಾದ್ಭೂತಾತ್ಮಾ ಷಟ್‌ಸ್ಥಲಾತ್ಮನಾಮೇಷಾಂ
ಭಕ್ತಾದೀನಾಂ ಪೃಥ್ವ್ಯಾದ್ಯಂಗಾನಾಮುಚ್ಯತೇಽತ್ರ ತತ್ತ್ವಾರ್ಥಃ ೬

ಆಧಾರಶ್ಚರತಾಂ ಸತಾಂ ಕ್ಷಿತಿರಥಾಚಾರಃ ಪಯಃ ಸ್ಯಾದ್ಗುರು-
ರ್ಬೋಧೋ ದಿವ್ಯಸುಧಾರಸಃ ಪರತರಂ ಜ್ಯೋತಿಃ ಶಿವಃ ಪಾವಕಃ
ಬಾಹ್ಯಾಂಭ್ಯಂತರಗಶ್ಚರೋ ಮರುದಥಾಕಾಶಃ ಪ್ರಸಾದಃ ಸ್ವಯಂ
ಶುದ್ಧಃ ಕಾಯವಿವರ್ಜಿತಃ ಖಲು ಮಹಾನ್ ಜೀವಃ ಷಡಂಗಾಂಗಿನಾಂ ೭

ಶಿವಾದ್ವೈತಪರಸ್ಯಾಸ್ಯ ನ ನಾಶೋ ನೈವ ಜನ್ಮ ಚ
ನೈವ ಚಾನ್ಯಾ ಗತಿರ್ನಾನ್ಯದ್ಬಂಧನಂ ನ ವಿಮೋಚನಂ ೮

ಅತ್ರೈವ ಲೀಯತೇ ಸಮ್ಯಕ್ಸರ್ವಮಾತ್ಮತಯಾ ಸತಃ
ಘೃತಕಾಠಿಣ್ಯವತ್‌ಸ್ವಪ್ನಪ್ರಪಂಚಮತಿಭಾಸವತ್ ೯

---

ರೂಪಿಗಳ ಭೌತಿಕ ಶರೀರವೂ ಆತ್ಮವೂ ಲಿಂಗರೂಪದಿಂದಿರುವವು. ಭಕ್ತಾದ್ಯಂಗಸ್ಥಲಗಳಿಗೆ ಅಂಗವಾಗಿರುವ ಪೃಥ್ವ್ಯಾದಿಗಳ ಲಿಂಗಸ್ವರೂಪದ ತತ್ತ್ವವು ಮುಂದೆ ಉಕ್ತವಾಗುವುದು (೬).

ಸೂ. ೭. ಷಡಂಗಿಗಳಾದ ಸತ್ಪುರುಷರ ಆಚರಣೆಗೆ ಆಧಾರವಾಗಿರು-ವುದರಿಂದ ಪೃಥ್ವಿಯು ಆಚಾರಲಿಂಗವೆನಿಸುವುದು. ರಸಮಯವಾದ ಜಲವು ಬೋಧಾಮೃತರಸರೂಪವಾದ ಗುರುಲಿಂಗವೆನಿಸುವುದು. ತೇಜಃಸ್ವರೂಪದ ಅಗ್ನಿಯು ಪರಂಜ್ಯೋತಿಃಸ್ವರೂಪದ ಶಿವಲಿಂಗವೆನಿಸುವುದು ದೇಹದೊಳ-ಹೊರಗೆ ಚರಿಸುವ ವಾಯು ಚರಲಿಂಗವೆನಿಸುವುದು. ಪ್ರಸನ್ನತೆಯಿಂದ ಕೂಡಿದ ಆಕಾಶವು ಪ್ರಸಾದಲಿಂಗವೆನಿಸುವುದು. ಭೂತಕಾಯರಹಿತನಾಗಿ ಶುದ್ಧನಾದ ಜೀವಾತ್ಮನು ಮಹಾಲಿಂಗರೂಪನೆನಿಸುವನು. (ಇದು ಪೃಥ್ವ್ಯಾ-ದಿಗಳ ಲಿಂಗಸ್ವರೂಪದ ನಿಜಾರ್ಥವು)

ಸೂ. ೮. ಶಿವಾದ್ವೈತಪರನಾದ ಷಟ್‌ಸ್ಥಲಬ್ರಹ್ಮಿಗೆ ಜನ್ಮಮರಣಗಳಿಲ್ಲ. ಅನ್ಯಗತಿಯಿಲ್ಲ. ಬಂಧಮೋಚನಗಳೂ ಇಲ್ಲ.

ಸೂ. ೯. ಹೆಪ್ಪುಗಟ್ಟಿದ ತುಪ್ಪವು ಕರಗುವಂತೆ ಅಥವಾ ಸ್ವಪ್ನದಲ್ಲಿ ತೋರಿದ ಪ್ರಪಂಚಮತಿಯು ಅಲ್ಲಿಯೇ ಬಯಲಾಗುವಂತೆ ಷಡಂಗಲಿಂಗಿ-

ಪ್ರತ್ಯಂಗರೂಪಃ ಪೃಥ್ವ್ಯಾದ್ಯೈರುಪಲಕ್ಷಣಮಾತ್ರತಃ
ಕಲ್ಪಿತೋ ಹಿ ಬಹಿರ್ದೇಹಃ ಸೋಽಯಮೇವಾವಶಿಷ್ಯತೇ ೧೦

ತಸ್ಯಾವಸಾನಕಾಲೇ ತು ಶಿವಕ್ಷೇತ್ರಂ ಸಮಾಶ್ರಯೇತ್
ಪ್ರಶಸ್ತಂ ಪ್ರಾಹುರಾಚಾರ್ಯಾಶ್ಚತುರಾಶ್ರಮಿಣಾಮಪಿ ೧೧

ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ
ಯಸ್ತು ಲಿಂಗಾಂಗಸಂಯುಕ್ತಃ ಶಿವಕ್ಷೇತ್ರಂ ಸಮಾಶ್ರಯೇತ್ ೧೨

ಲಿಂಗಂ ಶಿವೋ ಭವೇತ್ಕ್ಷೇತ್ರಮಂಗಂ ಸಂಯೋಗ ಆಶ್ರಯಃ
ತಸ್ಮಾಲ್ಲಿಂಗಾಂಗಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ ೧೩

---

ಯಾದ ಸತ್ಪುರುಷನಿಗೆ ಭೌತಿಕರೂಪವಾದ ಸರ್ವವೂ ಲಿಂಗಸ್ವರೂಪವಾದ ಸ್ವಾತ್ಮರೂಪದಿಂದ ತನ್ನಲ್ಲಿಯೇ ಲೀನವಾಗುವುದು.

ಸೂ. ೧೦. ಆದರೆ - ಭಕ್ತಾದ್ಯಂಗಸ್ಥಲಗಳಿಗೆ ಉಪಲಕ್ಷಣವಾಗಿ ಪೃಥ್ವ್ಯಾದಿಭೂತಗಳಿಂದ ಪ್ರತ್ಯಂಗರೂಪವಾಗಿ ಭಾವಿಸಲ್ಪಟ್ಟ ಬಹಿರ್ದೇಹವು ಮಾತ್ರ (ಅವಸಾನದಲ್ಲಿ) ಉಳಿದಿರುವುದು.

## ದೇಹಾವಸಾನದಲ್ಲಿ ಮಾಡುವ ಕ್ರಿಯೆ

ಸೂ. ೧೧, ೧೨. ಆದರೆ - ಶರೀರಾವಸಾನಕಾಲದಲ್ಲಿ ಮಾತ್ರ ಶಿವ-ಕ್ಷೇತ್ರವನ್ನು ಆಶ್ರಯಿಸಬೇಕು. ಹೀಗೆ ಆಶ್ರಯಿಸುವುದು ಚತುರಾಶ್ರಮಿ-ಗಳಿಗೂ ಪ್ರಶಸ್ತವೆಂದು ವೀರಶೈವಾಚಾರ್ಯರು ಹೇಳುವರು (೧೧). ಮೊದಲು, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ - ಇವರಲ್ಲಿ ಯಾವನೇ ಆಗಿರಲಿ ಅವನು ಲಿಂಗಾಂಗಸಂಯುಕ್ತನಾದಮೇಲೆ ಶಿವಕ್ಷೇತ್ರವನ್ನು ಆಶ್ರಯಿಸಬೇಕು (೧೨).

ಸೂ. ೧೩. ಶಿವ - ಕ್ಷೇತ್ರ - ಆಶ್ರಯವೆಂಬ ಪದಗಳಿಗೆ ಕ್ರಮವಾಗಿ ಲಿಂಗ-ಅಂಗ-ಸಂಯೋಗವೆಂಬರ್ಥವಿರುವುದು. ಆದುದರಿಂದ ಶಿವಕ್ಷೇತ್ರ-ವನ್ನಾಶ್ರಯಿಸಿದವನು ಲಿಂಗಾಂಗಸಂಯುಕ್ತನೆನಿಸಿಕೊಂಡು ಅತ್ಯಾಶ್ರಮಿ-ಯಾಗುವನು.

ಅತ್ಯಾಶ್ರಮಸ್ಥಃ ಕಾಲಜ್ಞಃ ಸ್ವತೋ ಧೀರಮನಾಃ ಸ್ವಕಂ
ದೇಹಂ ವಿನೈವ ರೋಗಾದ್ಯೈಃ ಸ್ವಯಮಂತೇ ಪರಿತ್ಯಜೇತ್ ೧೪

ಪ್ರಥಮಃ ಖನನೋಪಾಯೋ ದ್ವಿತಿಯೋ ದಹನಾತ್ಮಕಃ
ತೃತೀಯೋಽದರ್ಶನೋಪಾಯಃ ಸ್ವದೇಹಂ ತ್ಯಕ್ತುಮಿಚ್ಛತಾಂ ೧೫

ಪೃಥ್ವ್ಯಂಭೋಽಗ್ನಿವಾಯ್ವಂಬರಾತ್ಮನಾಂ ಭಾವತಃ ಕ್ರಮಾತ್
ಖನನಂ ದಹನಂ ಪ್ರೋಕ್ತಮದರ್ಶನಮತಃ ಪರಂ ೧೬

ಸ್ಯಾದಾತ್ಮಾಕಾಶಯೋರ್ಭಾವೋಽದರ್ಶನಂ ದಹನಂ ತತಃ
ವಾಯುಪಾವಕಯೋರ್ಭಾವಃ ಖನನಂ ಭೂಮಿವಾರಿಣೋಃ ೧೭

ಕ್ಷಿತೌ ಬ್ರಹ್ಮಾ ಜಲೇ ವಿಷ್ಣುಸ್ತಥಾ ರುದ್ರೋ ಹುತಾಶನೇ
ಈಶ್ವರಃ ಪವನೇ ತದ್ವದಾಕಾಶೇ ತು ಸದಾಶಿವಃ ೧೮

---

ಸೂ. ೧೪. ಅತ್ಯಾಶ್ರಮಿಯೂ ಸ್ವತಃ ದೇಹಾವಸಾನಕಾಲಜ್ಞನೂ ಆದ ವೀರಶೈವನು ಧೀರಮನನಾಗಿ ರೋಗಾದಿಗಳಿಲ್ಲದಿದ್ದರೂ ತನ್ನ ದೇಹವನ್ನು ತಾನೇ ಅವಸಾನಕಾಲದಲ್ಲಿ ತ್ಯಜಿಸಬೇಕು.

ಸೂ. ೧೫. ಸ್ವದೇಹವನ್ನು ತ್ಯಜಿಸಲಿಚ್ಛಿಸುವವರಿಗೆ ೧ ನೆಯದು ಖನನೋಪಾಯವು (ಭೂಮಿಯಲ್ಲಿ ಸಮಾಧಿ ಮಾಡುವುದು). ೨ ನೆಯದು ದಹನೋಪಾಯವು (ಅಗ್ನಿಯಲ್ಲಿ ಸಮಾಧಿ ಮಾಡುವುದು). ೩ ನೆಯದು ಅದರ್ಶನೋಪಾಯ (ಜಲಾದಿಸ್ಥಾನದಲ್ಲಿ ಸಮಾಧಿ).

ಸೂ. ೧೬. ಖನನ-ದಹನ-ಅದರ್ಶನ-ಇವು ಮೂರು ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮ-ಇವು ಆರು ಆರು ತತ್ತ್ವಭಾವನೆಗನುಸರಿಸಿರುವವು.
ಸೂ. ೧೭. ಆತ್ಮಾಕಾಶಗಳ ಭಾವನೆಗೆ ಅದರ್ಶನವೂ, ಪವನಾಗ್ನಿಗಳ ಭಾವನೆಗೆ ದಹನವೂ, ಜಲಭೂಮಿಗಳ ಭಾವನೆಗೆ ಖನನವೂ ಸಂಬಂಧಿಸಿರು-ವುದು.

ಸೂ. ೧೮, ೧೯, ೨೦. ಕ್ಷಿತಿಯಲ್ಲಿ ಬ್ರಹ್ಮನೂ, ಜಲದಲ್ಲಿ ವಿಷ್ಣುವೂ, ಅಗ್ನಿಯಲ್ಲಿ ರುದ್ರನೂ, ವಾಯುವಿನಲ್ಲಿ ಈಶ್ವರನೂ, ಆಕಾಶದಲ್ಲಿ

ಜೀವೇ ಪರಶಿವಃ ಸಾಕ್ಷಾದಿತಿ ತತ್ತ್ವಾರ್ಥನಿರ್ಣಯಃ
ಆತ್ಮಾಕಾಶಮಯಸ್ತದ್ವದ್ವಾಯುಃ ಪ್ರಾಣಮಯೋ ಭವೇತ್ ೧೯

ತೇಜೋಮಯಸ್ತ್ವಹಂಕಾರಸ್ತಥಾ ಜಲಮಯಂ ಮನಃ
ಪೃಥ್ವೀಮಯಂ ಶರೀರಂ ಸ್ಯಾದಿತ್ಯಾಹುಸ್ತತ್ತ್ವಚಿಂತಕಾಃ ೨೦

ಧೇನುಃ ಪೃಥ್ವೀ ಜಲಂ ಕ್ಷೀರಂ ತೇಜೋ ದಧಿ ಸಮೀರಣಃ
ನವನೀತಂ ಘೃತಂ ವ್ಯೋಮ ಚಾತ್ಮಾ ಪರಿಮಲಃ ಸ್ಮೃತಃ ೨೧

ಅದರ್ಶನಮತಿಶ್ರೇಷ್ಠಮವಿಯೋಗೋಽಂಗಲಿಂಗಯೋಃ
ತಥೈವ ದಹನಂ ಶ್ರೇಷ್ಠಂ ಶಿಖಿಕರ್ಪೂರಯೋಗವತ್ ೨೨

---

ಸದಾಶಿವನೂ, (೧೮) ಜೀವಾತ್ಮನಲ್ಲಿ ಪರಶಿವನೂ (ಅಧಿದೈವನಾಗಿ) ಇರು-ವರೆಂದು ತತ್ತ್ವಾರ್ಥನಿರ್ಣಯವಿರುವುದು. ಆತ್ಮನು ಆಕಾಶಮಯ-ನಾಗಿಯೂ, ವಾಯು ಪ್ರಾಣಮಯನಾಗಿಯೂ, (೧೯) ಅಹಂಕಾರವು ಅಗ್ನಿಮಯವಾಗಿಯೂ, ಮನವು ಜಲಮಯವಾಗಿಯೂ ಶರೀರವು ಪೃಥ್ವೀ ಮಯವಾಗಿಯೂ ಇರುವುದೆಂದು ತತ್ತ್ವಚಿಂತಕರು ಹೇಳುವರು (೨೦).

ವಿಚಾರ

೧೯-೨೦ ಸೂತ್ರಗಳೆರಡರಲ್ಲಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಈ ಐದು ಕ್ರಮವಾಗಿ-ಆತ್ಮ, ಪ್ರಾಣ, ಅಹಂಕಾರ, ಮನಸ್ಸು, ಶರೀರ-ಇವುಗಳ ಸ್ವರೂಪದಿಂದಿರುವವೆಂದು ಉಕ್ತವಾಗಿರುವುದು. ಇತರ ಗ್ರಂಥಗಳಲ್ಲಿ ಇದಕ್ಕೆ ಭಿನ್ನವಾದ ಕ್ರಮದಲ್ಲಿ ಉಕ್ತವಾಗಿರುವುದೂ ಉಂಟು.

ಸೂ. ೨೧. ಪೃಥ್ವಿಯು ಗೋವಾಗಿರುವುದು. ಜಲವು ಗೋವಿನ ಕ್ಷೀರವಾಗಿಯೂ, ಅಗ್ನಿಯು ದಧಿಯಾಗಿಯೂ, ವಾಯು ಬೆಣ್ಣೆಯಾಗಿಯೂ, ಆಕಾಶವು ತುಪ್ಪವಾಗಿಯೂ, ಆತ್ಮವು ತುಪ್ಪದ ಪರಿಮಳವಾಗಿಯೂ ಇರುವವು.

ಸೂ. ೨೨. ಲಿಂಗಾಂಗಗಳ ವಿಯೋಗವಾಗದಿರುವುದರಿಂದ ಅದರ್ಶನೋ-ಪಾಯವು ಅತಿಶ್ರೇಷ್ಠವಾಗಿರುವುದು. ಲಿಂಗದಲ್ಲಿ ಅಂಗವು ಉರಿಯುಂಡ ಕರ್ಪೂರದಂತೆ ಬಯಲಾಗುವುದರಿಂದ ದಹನೋಪಾಯವೂ ಶ್ರೇಷ್ಠವಾಗಿರು-ವುದು.

ತಯೋರಭಾವೇ ಖನನಂ ಶ್ರೇಷ್ಠಮಿತ್ಯಾಹುರಾಗಮಾಃ
ಕ್ಷೇತ್ರೇ ತೀರ್ಥೇ ತಥಾ ಹೋಮೇ ಜಪಧ್ಯಾನಸಮಾಧಿಷು ೨೩

ಯತ್ರ, ಯತ್ರ ಸ್ಥಿತೋ ಭಾವಃ ಪದೇ ಷಟ್‌ಸ್ಥಲವರ್ತ್ಮನಾಂ
ತತ್ರ ತತ್ರ ತ್ಯಜೇದ್ದೇಹಮಾಚಾರಾದಿಪದಂ ಪ್ರತಿ ೨೪

ಆಚಾರಾರ್ಥಂ ಚ ಗುರ್ವರ್ಥಂ ಶಿವಾರ್ಥಂ ಚ ಚರಾರ್ಥಕಂ
ಪ್ರಸಾದಾರ್ಥಂ ತನುತ್ಯಾಗೋ ನ ತ್ಯಾಗಸ್ತತ್ಸಮರ್ಪಣಂ ೨೫

ಕ್ಷೇತ್ರಮಾಚಾರಲಿಂಗಂ ಸ್ಯಾದ್ಭಕ್ತಾಂಗಂ ಕ್ಷಿತಿಲಕ್ಷಣಂ
ತೀರ್ಥಂ ಹಿ ಗುರುಲಿಂಗಂ ಸ್ಯಾನ್ಮಾಹೇಶಾಂಗಾಂಬು ಲಕ್ಷಣಂ ೨೬

---

ಸೂ. ೨೩, ೨೪. ಆದರ್ಶನವಹನಗಳು ಇಲ್ಲದಿದ್ದಾಗ ಖನನೋಪಾಯವು ಶ್ರೇಷ್ಠವೆಂದು ಆಗಮಗಳು ಹೇಳುವವು. ಕ್ಷೇತ್ರ, ತೀರ್ಥ, ಹೋಮ (ಅಗ್ನಿ), ಜಪ, ಧ್ಯಾನ, ಸಮಾಧಿ (೨೩)- ಇವುಗಳೊಳಗಾವುದರಲ್ಲಿ ಷಟ್‌ಸ್ಥಲಮಾರ್ಗಸ್ಥರಿಗೆ ಭಾವವು ನೆಲೆಗೊಂಡಿರುವುದೋ; ಅಲ್ಲಲ್ಲಿ ಆಚಾರಾದಲಿಂಗವನ್ನು ಕುರಿತು ಅವರು ತನುವನ್ನು ತ್ಯಜಿಸಬೇಕು (೨೪).

ಸೂ. ೨೫. ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ - ಇವುಗಳಿಗಾಗಿ ತನುತ್ಯಾಗಮಾಡುವುದೇ ಲಿಂಗಸಮರ್ಪಣವೆನಿಸುವುದು. ಆಚಾರಾದಿಲಿಂಗಗಳಿಗಾಗಿ ಮಾಡಿದ ತ್ಯಾಗವು ತ್ಯಾಗವೆನಿಸುವುದಿಲ್ಲ (ಅರ್ಪಣವಾಗುವುದಿಲ್ಲ).

ಸೂ. ೨೬. ಭಕ್ತನ ಅಂಗವೆನಿಸಿದ ಕ್ಷಿತಿಯ ಲಕ್ಷಣದಿಂದ ಕೂಡಿದ ಕ್ಷೇತ್ರವು ಆಚಾರಲಿಂಗವಾಗಿರುವುದು. ಮಹೇಶ್ವರನ ಅಂಗವೆನಿಸಿದ ಜಲದ ಲಕ್ಷಣದಿಂದ ಕೂಡಿದ ತೀರ್ಥವು ಗುರುಲಿಂಗವಾಗಿರುವುದು.

ಹೋಮಸ್ತು ಶಿವಲಿಂಗಂ ಸ್ಯಾತ್ಪ್ರಸಾದ್ಯಂಗಾಗ್ನಿ ಲಕ್ಷಣಂ
ಜಪಶ್ಚರಾಖ್ಯಲಿಂಗಂ ಸ್ಯಾತ್ ಪ್ರಾಣಲಿಂಗಾಂಗಮಾರುತಂ ೨೭

ಧ್ಯಾನಂ ಪ್ರಸಾದಲಿಂಗಂ ಸ್ಯಾಚ್ಛರಣಾಂಗಂ ಖಲಕ್ಷಣಂ
ಸಮಾಧಿಃ ಸ್ಯಾನ್ಮಹಾಲಿಂಗಮೈಕ್ಯಾಂಗಂ ಜೀವಲಕ್ಷಣಂ ೨೮

ಖನನಾವಗಾಹಹವನಾನಶನಾದಿಭಿರಾತ್ಮಘಾತಕೋ ನೈವ
ಶಿವಶಾಸ್ತ್ರೋಕ್ತೋಪಾಯೈಃ ಸ್ವಯಮೇವ ತನುಂ ತ್ಯಜೇಚ್ಛಿವೇ ವಸತಿ ೨೯

ಏತೇಷೂಪಾಯೇಷು ಶ್ರೇಷ್ಠತಮೋಽಯಂ ಹಿ ಸುಖಮುಖೋಪಾಯಃ
ಉನ್ಮನ್ಯುತ್ತರಯೋಗೇ ನಿವೃತ್ತಿಮಾರ್ಗೇ ಸ್ವಯಂ ತನುತ್ಯಾಗಃ ೩೦

---

ಸೂ. ೨೭. ಪ್ರಸಾದಿಯ ಅಂಗವೆನಿಸಿದ ಅಗ್ನಿಯ ಲಕ್ಷಣದಿಂದ ಕೂಡಿದ ಹೋಮವು ಶಿವಲಿಂಗವಾಗಿರುವುದು. ಪ್ರಾಣಲಿಂಗಿಯ ಅಂಗವೆನಿಸಿದ ವಾಯುವಿನ ಲಕ್ಷಣವುಳ್ಳ ಜಪವು ಚರಲಿಂಗವಾಗಿರುವುದು.

ಸೂ. ೨೮. ಶರಣಾಂಗವೆನಿಸಿದ ಆಕಾಶಲಕ್ಷಣವುಳ್ಳ ಧ್ಯಾನವು ಪ್ರಸಾದ ಲಿಂಗವಾಗಿರುವುದು. ಐಕ್ಯಾಂಗವೆನಿಸಿದ ಜೀವಾತ್ಮಲಕ್ಷಣವುಳ್ಳ ಸಮಾಧಿ ಸ್ಥಿತಿಯು ಮಹಾಲಿಂಗವಾಗಿರುವುದು.

ಸೂ. ೨೯. ಖನನ, ಅವಗಾಹ, (ಜಲಸಮಾಧಿ) ಹವನ, ಅನಶನ (ಉಪವಾಸ) ಮೊದಲಾದ ಶಿವಶಾಸ್ತ್ರೋಕ್ತವಾದ ಉಪಾಯಗಳಿಂದ ತಾನಾಗಿಯೇ ತನುವನ್ನು ತ್ಯಜಿಸಬೇಕು. ಹೀಗೆ ತ್ಯಜಿಸುವವನು ಆತ್ಮಘಾತಕನಾಗುವುದಿಲ್ಲ. ಶಿವನಲ್ಲಿ ವಾಸಿಸುವವನು (ಶಿವಸ್ವರೂಪನಾಗುವನು).

ಸೂ. ೩೦. ಉಕ್ತವಾದೀ ಉಪಾಯಗಳಲ್ಲಿ ನಿವೃತ್ತಿಮಾರ್ಗವೆನಿಸಿದ ಉನ್ಮನಿಯ (ಊರ್ಧ್ವ ಕುಂಡಲನಿಯ) ಉತ್ತರಯೋಗದಲ್ಲಿ ಸ್ವತಃ ತನುತ್ಯಾಗವು ಶ್ರೇಷ್ಠತಮವೂ ಸುಖಕರವೂ ಆದ ಉಪಾಯವಾಗಿರುವುದು. (ಅಮನಸ್ಕಸ್ವರೂಪವು ಉನ್ಮನಿಯೆನಿಸುವುದೆಂದು ಕೆಲವೆಡೆಯಲ್ಲಿ ಉಕ್ತವಾಗಿರುವುದು)

**ವಿಚಾರ**

ಉನ್ಮನಿಯ ಉತ್ತರಯೋಗವೆಂಬುದು ಶಿವಯೋಗವಾಗಿರುವುದೆಂದೂ ಆ ಶಿವಯೋಗಮಾರ್ಗದಿಂದಲೇ ತನುತ್ಯಾಗವನ್ನು ಮಾಡಬೇಕೆಂದೂ ಶಿವಾನುಭವಿಗಳ ವಿಚಾರವಿರುವುದು.

ಅಥ ರೋಗಾದಿಭಿರ್ವಾಪಿ ಪ್ರಾಣಲಿಂಗಾಂಗಯೋಗಭಾಕ್
ದೇಹಂ ಪರಿತ್ಯಜತ್ಯಂತೇ ಸಃ ಶಿವೇ ವಸತಿ ಧ್ರುವಂ ೩೧

ಬಾಹ್ಯಸ್ಯೋಪಾಧಿಮಾತ್ರಸ್ಯ ದೇಹಸ್ಯೈವ ತು ರುಗ್ಣತಾ
ನಾಂತರ್ದೇಹಸ್ಯ ಚಿನ್ಮಾತ್ರಸ್ಯೇತಿ ತತ್ತ್ವವಿದಾಂ ಸ್ಥಿತಿಃ ೩೨

ಕಾಲಜ್ಞೋಽಪ್ಯಯಮಾತ್ಮೀಯದೇಹಪಾತಂ ವಿಲೋಕಯನ್
ಪ್ರಾರಬ್ಧಪರಿಪಾಕಾಂತಂ ಸ್ಥಿತ್ವಾ ಹಿತ್ವಾ ಶಿವೋ ಭವೇತ್ ೩೩

ಸ್ವಯಮೇವ ಪರಿತ್ಯಾಗಾದ್ವರಂ ಪ್ರಾರಬ್ಧಪಾಕತಃ
ಸ್ವದೇಹಪತನಂ ಪಕ್ವಫಲವದ್ವೃಂತಮೋಚನಾತ್ ೩೪

---

ಸೂ. ೩೧. ಅವಸಾನಕಾಲದಲ್ಲಿ ರೋಗಾದಿಗಳಿಂದಾದರೂ ಯಾವಾತನು ಪ್ರಾಣಲಿಂಗವಾಗಿಯು ದೇವಹನ್ನು ತ್ಯಜಿಸುವನೋ; ಆತನೂ ನಿಶ್ಚಯವಾಗಿ ಶಿವಸ್ವರೂಪಿಯಾಗುವನು.

ಸೂ. ೩೨. ಉಪಾಧಿವಶದಿಂದ ಪ್ರಾಪ್ತವಾದ ಹೊರಗಿನ ಸ್ಥೂಲದೇಹಕ್ಕೆ ರೋಗವಿರುವುದಷ್ಟೆ. ಒಳಗಿನ ಚಿತ್ಸ್ವರೂಪವಾದ ಸೂಕ್ಷ್ಮಾಂಗಕ್ಕೆ ರೋಗವಿರುವುದಿಲ್ಲೆಂದು ತತ್ತ್ವವಿದರ ಅಭಿಪ್ರಾಯ.

ಸೂ. ೩೩. ಲಿಂಗಾಂಗಿಯು ಅವಸಾನಕಾಲಜ್ಞನಾದರೂ ತಾನೇ ದೇಹವನ್ನು ತ್ಯಜಿಸದೆ, ಪ್ರಾರಬ್ಧ ಕರ್ಮ ಮುಗಿಯುವವರೆಗೂ ಆತ್ಮೀಯದೇಹಪಾತವನ್ನು ನಿರೀಕ್ಷಿಸುತ್ತಿದ್ದು ಕೊನೆಗೆ ದೇಹವನ್ನು ಬಿಟ್ಟರೂ ಶಿವಸ್ವರೂಪಿಯಾಗುವನು.

ಸೂ. ೩೪. ತುಂಬಿನಿಂದ ಕಳಚಿ ಬಿದ್ದ ಮಾಗಿದ ಹಣ್ಣಿನಂತೆ ಪ್ರಾರಬ್ಧ ಪರಿಪಾಕದ ವಶದಿಂದ ಸ್ವದೇಹಪತನವಾಗುವುದೇ ತಾನಾಗಿಯೇ ದೇಹ ತ್ಯಾಗಮಾಡುವುದಕ್ಕಿಂತಲೂ ಶ್ರೇಷ್ಠವಾಗಿರುವುದು.

ರೋಗಾರೋಗಾದ್ಯುಪಾಯೇನ ಯೇನ ಕೇನಾಪಿ ಹೇತುನಾ
ಷಡಧ್ವಶುದ್ಧಿಯುಕ್ತಸ್ಯ ಪ್ರಾಣಲಿಂಗಾಂಗಸಂಗಿನಃ
ದೇಹಾವಸಾನಂ ಯದ್ಯಾಸೀತ್ತಸ್ಯ ನೈವಾನ್ಯಥಾ ಕ್ರಿಯಾ ೩೫

ಖನೇದ್ವಾ ಭುವಿ ತದ್ದೇಹಂ ಕ್ಷಿಪೇದ್ವಾಪ್ಸು ಶಿವಾಸ್ವಪಿ
ದಹೇದ್ವಾ ರುದ್ರವಹ್ನೌ ತು ತ್ಯಜೇದ್ವಾಯೌ ಚ ಲೋಷ್ಟವತ್ ೩೬

ಏತೇಷ್ವಪಿ ವಿಧಾನೇಷು ಖನನಂ ತೂತ್ತಮಂ ಮತಂ
ಆದರ್ಶನವಿಧಾನೇನ ಸದೃಶಂ ವ್ಯವಧಾನತಃ ೩೭

ದೇಹಂ ಪ್ರಾಣಂ ವಿನಿಕ್ಷಿಪ್ಯ ಲಿಂಗೇ ಲಿಂಗಂ ತದೇತಯೋಃ
ಆದೌ ದೀಕ್ಷಾ ಕೃತಾ ಶೈವೀ ಯಥಾ ಚಾಂತೇ ತಥೈವ ಹಿ ೩೮

---

ಸೂ. ೩೫. ಷಡಧ್ವಶುದ್ಧಿಯುಕ್ತನಾದ ಪ್ರಾಣಲಿಂಗಾಂಗಸಂಗಿಗೆ ದೇಹಾವಸಾನವಾದಾಗ ಬೇರೆ ಯಾವ ಕ್ರಿಯೆಯೂ ( ಸೂತಕಾದಿಯು ) ಉಕ್ತವಾಗಿಲ್ಲ

ಸೂ. ೩೬. ಆ ಪ್ರಾಣಲಿಂಗಿಯ ದೇಹವನ್ನು ಭೂಗತಮಾಡಬಹುದು. ಅಥವಾ ಮಂಗಲಕರ ಜಲದಲ್ಲಿ ಜಲಸಮಾಧಿಮಾಡಬಹುದು. ಇಲ್ಲವೆ ರುದ್ರಾಗ್ನಿಯಲ್ಲಿ ದಹನಮಾಡಬಹುದು. ಅಥವಾ ವಾಯುವಿನಲ್ಲಿ ಲೋಷ್ಟದಂತೆ ತ್ಯಜಿಸಿಬಿಡಬಹುದು.

ಸೂ. ೩೭. ಮೇಲೆ ಹೇಳಿದ ಎಲ್ಲ ವಿಧಾನಗಳಲ್ಲಿಯೂ ಖನನವು ( ಭೂಸಮಾಧಿಯು ) ಉತ್ತಮವಾಗಿರುವುದು. ಏಕೆಂದರೆ - ಶರೀರವನ್ನು ಭೂಮಿಯಲ್ಲಿಟ್ಟು ಮರೆಗೈಯುವುದರಿಂದ ಖನನೋಪಾಯವು ಅದರ್ಶನ ವಿಧಾನಕ್ಕೆ ಸಮಾನವಾಗಿರುವುದು. ( ಆದುದರಿಂದ ಖನನವು ಉತ್ತಮವೆನಿಸುವುದು. )

ಸೂ. ೩೮. ಆದಿಯಲ್ಲಿ ದೇಹಪ್ರಾಣಗಳನ್ನು ಲಿಂಗದಲ್ಲಿಯೂ ಲಿಂಗವನ್ನು ದೇಹಪ್ರಾಣಗಳಲ್ಲಿಯೂ ನೆಲೆಗೊಳಿಸಿ ಶಿವದೀಕ್ಷೆಯು ಮಾಡಲ್ಪಟ್ಟಿರುವುದು. ಆದುದರಿಂದ ಈ ದೇಹ-ಪ್ರಾಣಲಿಂಗಿಗಳ ಸಂಬಂಧವು ಅಂತದಲ್ಲಿ ( ದೇಹಾವಸಾನದಲ್ಲಿ ) ಯೂ ಹಾಗೆಯೇ ಉಳಿದಿರುವುದು.

ಕಾಯಲಿಂಗೋಃಭಯೋರ್ಯೋರ್ಗಃ ಪ್ರಾಣಮಂತ್ರೋಃಭಯೋಸ್ತಥಾ
ಪ್ರಾಣಮಂತ್ರೋಃಭಯೇಃತೀತೇ ಕಾಯಲಿಂಗೋಭಯಂ ಖನೇತ್ ೪೯

ಭೂಮೌ ಪ್ರತಿಷ್ಠಿತಂ ಲಿಂಗಂ ಯಥಾ ನೋತ್ಪಾಟ್ಯತೇ ಪುನಃ
ದೇಹೇ ಪ್ರತಿಷ್ಠಿತಂ ಲಿಂಗಮಂತೇ ನೋತ್ಪಾಟ್ಯತೇ ತಥಾ ೫೦

ಲಿಂಗೇ ಪ್ರಾಣೇ ವಿನಿಕ್ಷಿಪ್ತೇ ಲಿಂಗಿನಂ ತಂ ವಿನಿಕ್ಷಿಪೇತ್
ವಿಯುಕ್ತೇ ಪ್ರತ್ಯವಾಯಃ ಸ್ಯಾಜ್ಜೀವಮಾನೇ ಯಥಾ ತಥಾ ೫೧

ಯಃ ಪ್ರಾಣಲಿಂಗಸಂಲಗ್ನೋ ಲಿಂಗಪ್ರಾಣೀ ಸ ಉಚ್ಯತೇ
ತದ್ದೇಹದಹನಾದೇವ ಪ್ರತ್ಯವಾಯೋ ಮಹಾನ್ ಭವೇತ್ ೫೨

---

ಸೂ. ೪೯. ದೀಕ್ಷೆಯಿಂದ ಸ್ಥೂಲದೇಹಕ್ಕೂ ಇಷ್ಟಲಿಂಗಕ್ಕೂ ಸಂಯೋಗವಾದಂತೆ ಪ್ರಾಣಕ್ಕೂ ಇಷ್ಟಲಿಂಗವಾಚಕವಾದ ಮಂತ್ರಕ್ಕೂ ಸಂಯೋಗವಾಗಿರುವುದು. ದೇಹಾವಸಾನಕಾಲದಲ್ಲಿ ಪ್ರಾಣಮಂತ್ರಗಳೆರಡು ಹೊರಟು ಹೋಗಲಾಗಿ ಉಳಿದ ದೇಹಲಿಂಗಗಳೆರಡನ್ನೂ ಖನನ ( ಸಮಾಧಿ ) ಮಾಡಬೇಕು.

ಸೂ. ೫೦. ಭೂಮಿಯಲ್ಲಿ ಪ್ರತಿಷ್ಠಿಸಿದ ಲಿಂಗವನ್ನು ಹೇಗೆ ಉತ್ಪಾಟನ ( ಕಿತ್ತಿಹಾಕುವುದು ) ಮಾಡಬಾರದೋ; ಹಾಗೆಯೇ ದೇಹದಲ್ಲಿ ಪ್ರತಿಷ್ಠಿಸಿದ ಲಿಂಗವನ್ನು (ದೇಹಾವಶಾನಸಮಯದಲ್ಲಿ) ಉತ್ಪಾಟನ ಮಾಡಬಾರದು.

ಸೂ. ೫೧. ಲಿಂಗವನ್ನು ಧರಿಸಿದವನ ಪ್ರಾಣವನ್ನು ದೀಕ್ಷೆಯ ಕಾಲದಲ್ಲಿ ಲಿಂಗದಲ್ಲಿ [ನಿಕ್ಷೇಪಗೊಳಿಸಿದಂತೆ, ಆ ಲಿಂಗದೊಡನೆಯೇ ಲಿಂಗಾಂಗಿಯನ್ನು ಭುವಿಯಲ್ಲಿ ನಿಕ್ಷೇಪಮಾಡಬೇಕು. ಲಿಂಗೈಕ್ಯನಾದಮೇಲೆ ಅವನ ಲಿಂಗವನ್ನು ದೇಹದಿಂದಗಲಿಸಿದರೆ ಜೀವಿಸಿರುವಾಗ ಲಿಂಗವನ್ನಗಲಿರುವುದರಿಂದುಂಟಾಗುವ ದೋಷವೇ ಪ್ರಾಪ್ತವಾಗುವುದು.

ಸೂ. ೫೨. ಯಾವನು ಪ್ರಾಣಲಿಂಗಗಳ ಸಾಮರಸ್ಯವುಳ್ಳವನಾಗಿರುವನೋ; ಅವನು ಲಿಂಗಪ್ರಾಣಿಯೆನಿಸುವನು. ಅವನ ದೇಹವನ್ನು ಅವಸಾನಕಾಲದಲ್ಲಿ ದಹನಮಾಡುವುದರಿಂದ ಮಹಾದೋಷವು ಪ್ರಾಪ್ತವಾಗುವುದು.

ದಗ್ಧಸ್ಯ ದಹನಂ ನಾಸ್ತಿ ಪಕ್ವಸ್ಯ ಪಚನಂ ಯಥಾ
ಶಿವಜ್ಞಾನಾಗ್ನಿದಗ್ಧಸ್ಯ ಪುನರ್ದಾಹೋ ನ ವಿದ್ಯತೇ ೪೩

ಶರೀರಂ ಪಾರ್ಥಿವಂ ಬಾಹ್ಯಂ ಲಿಂಗಂ ಯತ್ತದ್ಧಿ ಪಾರ್ಥಿವಂ
ಉಭಯಂ ಪಾರ್ಥಿವಂ ತಸ್ಮಾದ್ಗೋಪ್ಯಂ ರಂಧ್ರೇ ತು ಪಾರ್ಥಿವೇ ೪೪

ಪೃಥ್ವೀ ಶೀರ್ಣಾ ಜಲೇ ಮಗ್ನಾ ಜಲಂ ಗ್ರಸ್ತಂ ಮಹಾಗ್ನಿನಾ
ವಾಯೌ ಚಾಸ್ತಮಿತಂ ತೇಜೋ ವ್ಯೋಮ್ನಿ ವಾತೋ ವಿಲೀಯತೇ ೪೫

ವ್ಯೋಮ ಚಾತ್ಮನಿ ಚಾತ್ಮಾಸೌ ಸ್ವೀಯೇ ಪರಶಿವೇ ಪದೇ
ಪಾರ್ಥಿವಂ ಪಾರ್ಥಿವೇ ಗೋಪ್ಯಮಾಪ್ಯಮಾಪ್ಯೇ ತು ತೈಜಸಂ ೪೬

---

ಸೂ. ೪೩. ಲೋಕದಲ್ಲಿ ದಗ್ಧವಾದ ವಸ್ತುವನ್ನು ಹೇಗೆ ಪುನಃ ದಹನಮಾಡುವುದಿಲ್ಲವೋ ಮತ್ತು ಪಕ್ವವಾದಾಹಾರವನ್ನು ಪುನಃ ಪಚನ ಮಾಡುವುದಿಲ್ಲವೋ ಹಾಗೆಯೇ ಶಿವಾಗ್ನಿಯಿಂದ ದಗ್ಧವಾದ ಲಿಂಗಾಂಗಿ ಶರೀರವನ್ನು ಪುನಃ ದಹನಮಾಡುವುದಿರುವುದಿಲ್ಲ.

ಸೂ. ೪೪. ಬಾಹ್ಯ ಶರೀರವು ಪಾರ್ಥಿವಾಗಿರುವಂತೆ ಲಿಂಗವೂ ಪಾರ್ಥವಾಗಿರುವುದು. ಆದುದರಿಂದ ಪೃಥ್ವೀಮಯವಾದ ಶರೀರಲಿಂಗ-ಗಳೆರಡನ್ನು ಪೃಥ್ವಿಯ ರಂಧ್ರದಲ್ಲಿ ( ಸಮಾಧಿಯಲ್ಲಿ ) ಗೋಪ್ಯ ಮಾಡಬೇಕು.

ಸೂ. ೪೫, ೪೬, ೪೭. ಪೃಥ್ವಿಯು ಪುಡಿಯಾಗಿ ಜಲದಲ್ಲಿ ಮಗ್ನ-ವಾಗುವುದು. ಜಲವು ಅಗ್ನಿಯ ಗ್ರಾಸವಾಗುವುದು. ಅಗ್ನಿಯು ವಾಯುವಿನಲ್ಲಿ ಅಸ್ತಂಗತವಾಗುವುದು. ವಾಯುವು ಆಕಾಶದಲ್ಲಿ ಲೀನ ವಾಗುವುದು (೪೫). ಆಕಾಶವು ಆತ್ಮನಲ್ಲಿ ಲೀನವಾಗುವುದು. ಆತ್ಮನು ಸ್ವಕೀಯ ಸ್ಥಾನವಾದ ಶಿವನಲ್ಲಿ ಲೀನವಾಗುವನು. ಪೃಥ್ವಿಯು ಪೃಥ್ವಿ-ಯಲ್ಲಿಯೂ, ಜಲವು ಜಲದಲ್ಲಿಯೂ, ಅಗ್ನಿಯು (೪೬) ಅಗ್ನಿಯಲ್ಲಿಯೂ ಹೀಗೆ ಪೃಥ್ವ್ಯಾದಿ ಪದಾರ್ಥಗಳು ಪೃಥ್ವ್ಯಾದಿ ಪದಾರ್ಥಗಳಲ್ಲಿಯೇ

ತೈಜಸೇ ತತ್ತದೀಯಂ ಚ ತತ್ತದೀಯೋ ಸ್ವಭಾವತಃ
ದಹನಂ ಚಾಪಿ ರುದ್ರಾಗ್ನೌ ವರಂ ಲಿಂಗಾಂಗಸಂಗಿನಾಂ ೪೭

ತಯೋರ್ವಿವಿಕ್ತಭಾವೇನ ಯದಿ ಕಿಂಚಿನ್ನ ಶಿಷ್ಯತೇ
ಶಿಷ್ಯತೇ ಚೇದ್ವರಂ ಭೂಮೌ ಖನನಂ ಚಾಂಗಲಿಂಗಯೋಃ ೪೮

ಅಂಗಂ ಶರೀರಮಾಖ್ಯಾತಂ ಲಿಂಗಂ ಸ್ಯಾತ್ಪಾರ್ಥಿವಂ ಹಿ ಯತ್
ಯಯೋಃ ಪೂರ್ವೋಕ್ತಯೋರೇತದುಭಯಂ ಚೋಪಲಕ್ಷಣಂ ೪೯

ಅಂಗಶೇಷೋ ಭವೇತ್ಕಶ್ಚಿಲ್ಲಿಂಗಶೇಷೋಽಪಿ ಕಶ್ಚನ
ಶೇಷೋ ನ ದೃಶ್ಯತೇ ಯತ್ರ ತದ್ವಿಧಾನಮನುತ್ತಮಂ ೫೦

---

ಸ್ವಾಭಾವಿಕವಾಗಿಯೇ ಗೋಪ್ಯವಾಗತಕ್ಕವಾಗಿರುವವು. ಅವಸಾನಕಾಲದಲ್ಲಿ ಲಿಂಗಾಂಗಸಂಗಿಗಳ ದಹನವನ್ನು ರುದ್ರಾಗ್ನಿಯಲ್ಲಿ ಮಾಡುವುದಾದರೂ ಶ್ರೇಷ್ಠವಾಗಿರುವುದು (೪೭).

ಸೂ. ೪೮. ಲಿಂಗಾಂಗಗಳು ವಿಯೋಗವಾಗಿ ಸ್ವಲ್ಪವೂ ಉಳಿಯದಂತೆ ದಹನವಾದ ಪಕ್ಷದಲ್ಲಿ ದಹನವು ಶ್ರೇಷ್ಠವು. ದಹನವಾದಾಗ್ಯೂ ಲಿಂಗಾಂಗಭಾಗಗಳು ಉಳಿಯುವ ಪಕ್ಷದಲ್ಲಿ ಆ ಲಿಂಗಾಂಗಗಳನ್ನು ಭೂಮಿಯಲ್ಲಿ ಖನನ ಮಾಡುವುದೇ ಶ್ರೇಷ್ಠವು.

ಸೂ. ೪೯. ಪಾರ್ಥಿ ಶರೀರವು ಅಂಗವೆಂಬುದಾಗಿಯೂ ಪಾರ್ಥಿವ ಲಿಂಗವು ಇಷ್ಟಲಿಂಗವೆಂಬುದಾಗಿಯೂ ಹೇಳಲ್ಪಟ್ಟಿರುವವಷ್ಟೇ. ಹೀಗೆ ಹೇಳುವುದು ಪೂರ್ವೋಕ್ತವಾದ ಭಕ್ತಾದಿಸ್ಥಲಗಳ ಅಂಗ ಲಿಂಗಗಳುಭಯಕ್ಕೆ ಉಪಲಕ್ಷಣವಾಗಿರುವುದು. (ಈ ಸೂತ್ರಾರ್ಥವು ಅಸ್ಫುಟವಾಗಿರುವದೆಂಬ ವಾದವಿರುವುದು)

ಸೂ. ೫೦. ದಹನಾದ್ಯುಪಾಯಗಳಲ್ಲಿ ಒಬ್ಬನು ಅಂಗಶೇಷವುಳ್ಳವನಾಗಬಹುದು. ಮತ್ತೊಬ್ಬನು ಲಿಂಗಶೇಷವುಳ್ಳವನಾಗಬಹುದು. ಯಾವ ಉಪಾಯದಲ್ಲಿ ಲಿಂಗಾಂಗಗಳ ಶೇಷವು ಕಾಣದಂತಾಗುವುದೋ; ಆ ವಿಧಾನವೇ ಅತ್ಯಂತಶ್ರೇಷ್ಠವೆನಿಸುವುದು.

ದಗ್ಧೇಽಪಿ ದೇಹೇ ಪುನರಂಗಶೇಷೋ ನಿಕ್ಷಿಪ್ಯತೇಽಂತೇ
ಭುವಿ ವಾ ಜಲೇ ವಾ
ತಸ್ಮಾದ್ವಿನಿಕ್ಷೇಪವಿಧಿರ್ಬಲೀಯಾನ್ ನಿಃಶೇಷಭಾವಾದ
ಪುನರ್ವಿಧಾನಾತ್ ೫೧

ಪುನರನ್ಯಂ ಪ್ರವಕ್ಷ್ಯಾಮಿ ಪೂರ್ವಾಚಾರ್ಯೈರ್ಮತೈರಪಿ
ಅಥ ಕಶ್ಚಿದ್ವಿಶೇಷೋಽಸ್ತಿ ನಿಕ್ಷೇಪಾದಿಷು ಕರ್ಮಸು
ಪ್ರಾಣಲಿಂಗಾಂಗಸಂಯೋಗಪರಾಣಾಂ ಮತಭೇದತಃ ೫೨

ಪ್ರಾಣಪ್ರಯಾಣಕಾಲೇ ತು ಲಿಂಗಭೋಗೋಪಭೋಗಿನಃ
ಅರ್ಪಿತಃ ಸಾವಧಾನೇನ ಸ್ವಲಿಂಗೇ ಪ್ರಾಣ ಆಹಿತಃ ೫೩

ಸಂಯೋಗೇ ಚ ವಿಯೋಗೇ ಚ ಯೋಽಣುಮಾತ್ರಸಮರ್ಪಣಂ
ಪ್ರಕುರ್ಯಾತ್ ಸ್ವೇಷ್ಟಲಿಂಗೇ ತು ಸಃ ಸಾಯುಜ್ಯಪದೇ ಸ್ಥಿತಃ ೫೪

---

ಸೂ. ೫೧. ದಹನವಿಧಿಯಲ್ಲಿ ದಗ್ಧವಾದ ದೇಹದ ಉಳಿದ ಭಾಗವು (ಅಸ್ತಿಗಳು) ಪುನಃ ಕೊನೆಯಲ್ಲಿ ಭುವಿಯಲ್ಲಿಯೋ ಜಲದಲ್ಲಿಯೋ ನಿಕ್ಷಿಪ್ತವಾಗುವುದು. ಭುವಿಯಲ್ಲಿ ನಿಕ್ಷೇಪಮಾಡಿದ್ದಾದರೆ, ಉಳಿದ ಭಾಗದ ಪುನರ್ವಿಧಾನವಿಲ್ಲದೆ ದೇಹವು ನಿಃಶೇಷವಾಗಿ ಬಿಡುವುದು. ಆದುದರಿಂದ ಖನನವಿಧಾನವು ಬಲವತ್ತರವಾಗಿರುವುದು.

ಸೂ. ೫೨. ಪೂರ್ವಾಚಾರ್ಯರ ಅಭಿಪ್ರಾಯಕ್ಕನುಸರಿಸಿ ಮತ್ತೊಂದು ವಿಷಯವನ್ನು ಹೇಳುವೆನು. ಪ್ರಾಣಲಿಂಗಾಂಗಸಂಯೋಗಪರರ ಅಭಿ. ಪ್ರಾಯಭೇದದಿಂದ ನಿಕ್ಷೇಪಾದಿ ಕ್ರಿಯೆಗಳಲ್ಲಿ ಒಂದಾನೊಂದು ವಿಶೇಷ ವಿಷಯವಿರುವುದು.

ಸೂ. ೫೩. ಪ್ರಾಣಾವಸಾನಸಮಯದಲ್ಲಿ ಲಿಂಗಭೋಗೋಪಭೋಗಿ. ಯಾದವನ ಪ್ರಾಣವು ಅವನಿಂದ ಪರಿಗ್ರಹಿಸಲ್ಪಟ್ಟು ಸಾವಧಾನದಿಂದ ಅವನಿಷ್ಟಲಿಂಗದಲ್ಲಿ ಅರ್ಪಿತವಾಗಿರುವುದು.

ಸೂ. ೫೪. ಯಾವನು ತನ್ನ ಪ್ರಾಣಸಂಯೋಗಕಾಲದಲ್ಲಿ ಮತ್ತು ಪ್ರಾಣವಿಯೋಗಕಾಲದಲ್ಲಿ ತನ್ನಿಷ್ಟಲಿಂಗದಲ್ಲಿ ಅಣುಮಾತ್ರ ಸಮರ್ಪಣ- ವನ್ನು ಮಾಡುವನೋ; ಅವನು ಸಾಯುಜ್ಯ ಪದವಿಯನ್ನು ಹೊಂದುವನು.

ಅಭಾವೇ ಭಾವಮಾಸಾದ್ಯ ಹ್ಯಸ್ಥಾನೇ ಸ್ಥಾನಮಾಚರನ್
ಏತದ್ದ್ವಯಂ ವಿಜಾನಾತಿ ಸಃ ಸಾಯುಜ್ಯಪದೇ ಸ್ಥಿತಃ ೫೫

ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಂ
ತಂ ತಮೇವೈತಿ ತತ್ತ್ವಜ್ಞಃ ಸದಾ ತದ್ಭಾವಭಾವಿತಃ ೫೬

ಅಂತ್ಯಕಾಲೇ ಪ್ರಬುದ್ಧೋ ಯಃ ಸುಹೃದಾ ಬೋಧಿತೋಽಪಿ ವಾ
ಶಿವಮೇಕಮನುಧ್ಯಾಯನ್ ಸ ಯಾತಿ ಪರಮಂ ಪದಂ ೫೭

ಯದಾ ಶಿವಾತ್ಮಕಂ ರೂಪಂ ಧ್ಯಾಯನ್ ಪ್ರಾಣೈರ್ವಿಮುಚ್ಯತೇ
ತದಾಽಸೌ ಶಿವತಾಂ ಯಾತಿ ನಾನ್ಯಾಂ ಗತಿಮಿತಿ ಶ್ರುತಿಃ ೫೮

---

ಸೂ. ೫೫. ಯಾವನು ಭಾವನೆಗೆ ಅಶಕ್ಯವಾದ ಕಾಲದಲ್ಲಿ ಭಾವನೆಯನ್ನು ಪಡೆದುಕೊಂಡು ತನಗೆ ಸ್ಥಾನವಿಲ್ಲದ ಪ್ರದೇಶದಲ್ಲಿ ಸ್ಥಾನವನ್ನು ಕಲ್ಪಿಸಿಕೊಂಡು ಆಚರಿಸುವನಾಗಿ - ಹೀಗೆ ಕಾಲದೇಶದ್ವಯದ ಸದುಪಯೋಗವನ್ನು ತಿಳಿದುಕೊಂಡಿರುವನೋ; ಅವನು ಸಾಯುಜ್ಯವನ್ನು ಪಡೆಯುವನು. (ಈ ಸೂತ್ರಾರ್ಥವು ಸ್ಫುಟವಿಲ್ಲವೆಂಬ ಅಭಿಪ್ರಾಯವಿರುವುದು.)

ಸೂ. ೫೬. ಯಾವಾಗಲೂ ಸದ್ಭಾವನಪರನಾದ ತತ್ತ್ವಜ್ಞನು ದೇಹಾವಸಾನಕಾಲದಲ್ಲಿ ಯಾವ ಯಾವ ವಸ್ತುಭಾವವನ್ನು ಸ್ಮರಿಸುತ್ತಾ ದೇಹವನ್ನು ಬಿಡುವನೋ ಆಯಾ ವಸ್ತುಭಾವವನ್ನೇ ಅನಂತರದಲ್ಲಿ ಹೊಂದುವನು.

ಸೂ. ೫೭. ಅಂತ್ಯಕಾಲದಲ್ಲಿ ತಾನೇ ಜಾಗ್ರತನಾಗಿ ಅಥವಾ ಸನ್ಮಿತ್ರನಿಂದ ಬೋಧಿತನಾಗಿ ಶಿವನೋರ್ವನನ್ನು ಯಾವನು ಧ್ಯಾನಿಸುತ್ತಿದ್ದು ಪ್ರಾಣ ಬಿಡುವನೋ ಅವನು ಪರಶಿವಪದವಿಯನ್ನು ಹೊಂದುವನು.

ಸೂ. ೫೮. ಯಾವಾಗ ಶಿವಸ್ವರೂಪವನ್ನು ಧ್ಯಾನಮಾಡುತ್ತ ಪ್ರಾಣ ಬಿಡುವನೋ ಆಗ ಜೀವಿಯು ಅನ್ಯಗತಿಯನ್ನು ಹೊಂದದೆ ಶಿವತ್ವವನ್ನು ಹೊಂದುವನೆಂದು ಹೇಳುವ ಶ್ರುತಿಯಿರುವುದು.

ನ ಪ್ರಾಣಲಿಂಗಿನಃ ಕಾಲೋ ನ ಲಿಂಗಪ್ರಾಣಿನಸ್ತಥಾ
ಕರ್ಮಾಪಿ ವ್ಯವಹಾರೇಣ ಕಾಲೇ ಕರ್ಮ ಪ್ರಸಜ್ಯತೇ ೫೯

ಕಾಲೋಚಿತಂ ವಿಧಾತವ್ಯಂ ಯತ್ತತ್ಕರ್ಮೇತಿ ಕೀರ್ತಿತಂ
ಕಾಲಕರ್ಮವಿಪಾಕೇನ ವಿನಾ ನಾಸ್ತ್ಯಪಿ ಕಿಂಚನ ೬೦

ಯದಾ ಪ್ರಾಣೋ ವಿಯುಕ್ತಃ ಸ್ಯಾದಂತಕಾಲೇ ಶರೀರತಃ
ತದಾ ತಯೋರ್ವಿಯೋಗೋ ಹಿ ಸತ್ಯಂ ಬಾಹ್ಯಾಂಗಲಿಂಗಯೋಃ ೬೧

ವಿಯೋಗೇ ಕೋ ವಿಭೇದೋऽತ್ರ ಯಯೋರ್ಜ್ಞಾನವಿವರ್ಜಿತೇ
ವಿಜ್ಞಾತೇ ಸತಿ ಸಂಯೋಗೇ ವಿಯೋಗಸ್ತದ್ವಿಪರ್ಯಯೇ ೬೨

---

ಸೂ. ೫೯. ಪ್ರಾಣಲಿಂಗಿ ಅಥವಾ ಲಿಂಗಪ್ರಾಣಿಯಾದವನಿಗೆ ಕಾಲವೂ ಇಲ್ಲ. ಆ ಕಾಲೋಚಿತ ಕರ್ಮವೂ ಇಲ್ಲ. ಲೋಕವ್ಯವಹಾರದಿಂದ ಮಾತ್ರ ಕಾಲದಲ್ಲಿ ಕರ್ಮ ಪ್ರಸಕ್ತಿಯುಂಟಾಗುವುದು.

ಸೂ. ೬೦. ಕಾಲೋಚಿತವಾಗಿ ಮಾಡುವ ವಿಧ್ಯುಕ್ತಕ್ರಿಯೆಯು ಕರ್ಮವೆನಿಸುವುದು. ಕಾಲಕರ್ಮಪರಿಪಾಕವಿಲ್ಲದೆಯೇ ಯಾವುದೂ ಮಾಡತಕ್ಕದಿಲ್ಲ.

ಸೂ. ೬೧. ಲಿಂಗಾಂಗಿಯಾದವನ ಶರೀರದಿಂದ ಯಾವಾಗ ಪ್ರಾಣ-ವಿಯೋಗವಾಗುವುದೋ; ಆಗಳೇ ಅವನ ಬಾಹ್ಯವಾದ ಅಂಗಲಿಂಗಗಳೆರಡರ ವಿಯೋಗವೂ ಸತ್ಯವಾಗಿರುವುದು.

ಸೂ. ೬೨. ಪ್ರಾಣ ಹೋದ ಮೇಲೆ ಆಗುವ ಲಿಂಗಾಂಗಗಳ ಜ್ಞಾನ-ರಹಿತವಾದ ವಿಯೋಗದಲ್ಲಿ ಯಾವ ಭೇದವಿರುವುದು ? (ಯಾವ ಭೇದವೂ ಇಲ್ಲ) ಜ್ಞಾನವಿದ್ದಾಗ ಲಿಂಗಗಳ ಸಂಯೋಗವಿರುವುದು. ಜ್ಞಾನವಿಲ್ಲದಾಗ ಅವುಗಳ ವಿಯೋಗವಿರುವುದು (ಸಹಜವು).

ಸೂ. ೬೩. ಲಿಂಗಾಂಗಗಳ ನಿಷೇಧಾರ್ಥವಿಷಯದಲ್ಲಿಯೂ ವಿಧ್ಯರ್ಥ ವಿಷಯದಲ್ಲಿಯೂ ವಿಚಾರಮುಖದಿಂದ ಆ ಲಿಂಗಾಂಗಗಳ ವಿಯೋಗ ಸಂಯೋಗಗಳನ್ನು ತಿಳಿಯುತ್ತಿದ್ದ ಪ್ರಾಣಸಹಿತಾತ್ಮನೇ ಲಿಂಗಾಂಗಗಳನ್ನು

ವಿಯೋಗಯೋಗವಿಜ್ಞಾತಾ ಪ್ರಾಣಾತ್ಮಾ ಗತವಾನ್ ಯತಃ
ಲಿಂಗಾಂಗಯೋರ್ನಿಷೇಧಾರ್ಥೇ ವಿಧ್ಯರ್ಥೇಽಪಿ ವಿಚಾರತಃ ೬೩

ನ ಲಿಂಗಮಾದೌ ದೇಹಸ್ಯ ನಾವಸಾನೇಽಪಿ ತತ್ತ್ವತಃ
ಮಧ್ಯೇ ಸಮಾಗತಂ ಭೂಯೋ ಗತಂ ಕಿಂನ್ವಿಚಿತ್ರಮುಚ್ಯತಾಂ ೬೪

ಆದೌ ಶಸ್ತಂ ವಿಧಾನೇನ ಯಚ್ಛಿಖಾಸೂತ್ರಧಾರಣಂ
ತಚ್ಛಿಕಾಸೂತ್ರ ಜಹನಮಂತೇ ಶಸ್ತಂ ಯಥಾ ತಥಾ ೬೫

ಅತೋ ಲಿಂಗಾಂಗಯೋರಂತೇ ವಿಯೋಗೋ ನ ವಿರುಧ್ಯತೇ
ನ ಚ ದೋಷಾಯ ಕರ್ತವ್ಯೇಷೂತ್ತರೇಷ್ವಪಿ ಕರ್ಮಸು ೬೬

---

ಬಿಟ್ಟು ಹೋದ ಕಾರಣದಿಂದ ಲಿಂಗಾಂಗಗಳ ಜ್ಞಾನರಹಿತ ವಿಯೋಗವು ಸಹಜವಾದುದು. (ಈ ಸೂತ್ರಾರ್ಥವು ಕ್ಲಿಷ್ಟವಾಗಿರುವದು)

ಸೂ. ೬೪. ನಿಜವಾಗಿ ನೋಡಿದರೆ ಜನನದ ಆದಿಯಲ್ಲಿ ದೇಹಕ್ಕೆ ಲಿಂಗವಿಲ್ಲ, ಅಂತದಲ್ಲಿಯೂ ಲಿಂಗವಿರುವುದಿಲ್ಲ. ಮಧ್ಯಕಾಲದಲ್ಲಿ ಬಂದ ಲಿಂಗವು ಪುನಃ ದೇಹದಿಂದ ವಿಯೋಗವಾಗುವದು. ಈ ವಿಷಯದಲ್ಲಿ ಆಶ್ಚರ್ಯವೇನು? ( ಈ ಸೂತ್ರಾರ್ಥವು ಜನನಾನಂತರದಲ್ಲಿ ಮಾಡುವ ಲಿಂಗಧಾರಣಕ್ಕೆ ಸಂಬಂಧಿಸಿರುವುದು )

ಸೂ. ೬೫. ಆದಿಯಲ್ಲಿ ವಿಧಿಗನುಸರಿಸಿ ಯಾವ ಶಿಖಾಯಜ್ಞೋಪವೀತ ಧಾರಣವು ಹೇಗೆ ಪ್ರಶಸ್ತವೆನಿಸಿದ್ದಿತೋ, ಹಾಗೆ ಅಂತದಲ್ಲಿ ಆ ಶಿಖಾಯಜ್ಞೋಪವೀತಗಳ ತ್ಯಾಗವೂ ಪ್ರಶಸ್ತವೆನಿಸಿಕೊಳ್ಳುವುದು.

ಸೂ. ೬೬. ಈ ಶಿಖಾಯಜ್ಞೋಪವೀತವಿಧಿಯಂತೆ ಅಂತದಲ್ಲಿ ಲಿಂಗಾಂಗಗಳ ವಿಯೋಗವಾಗುವುದು ವಿರೋಧವಲ್ಲ. ಮತ್ತು ಲಿಂಗವಿಯೋಗಾನಂತರದಲ್ಲಿ ಮಾಡುವ ಉತ್ತರಕ್ರಿಯೆಗಳಲ್ಲಿಯೂ ದೋಷವಿಲ್ಲ.

ದೇಹಂ ತ್ಯಕ್ತ್ವಾವಸಾನೇಽಸೌ ಪ್ರಾಣಾತ್ಮಾ ಪ್ರವಿವೇಶ ಹಿ
ಸ್ವೇಷ್ಟಲಿಂಗೇ ಸ್ವಯಂ ತಸ್ಮಾಲ್ಲಿಂಗದೇಹಾದ್ವಿಯುಜ್ಯತೇ ೬೭

ಸ್ವಯಂ ಸಮರ್ಪಿತಪ್ರಾಣಃ ಸ್ವೇಷ್ಟಲಿಂಗೇ ಸಮಾಹಿತಃ
ಸುಗುಪ್ತಃ ಸಂಸ್ಥಿತಸ್ತಸ್ಮಾಲ್ಲಿಂಗದೇಹಾದ್ವಿಮುಚ್ಯತೇ ೬೮

ದೇಹ ಏವ ಹಿ ಸಂಸ್ಕಾರಯೋಗ್ಯೋ ಹ್ಯಂತೇ ಯಥಾವಿಧಿ
ನ ಯೋಗ್ಯಂ ಲಿಂಗಮೇತಸ್ಮಾಲ್ಲಿಂಗಮಾದಾಯ ಪೂಜಯೇತ್ ೬೯

ಲಿಂಗಸ್ಥಿತಂ ಶಿವಾತ್ಮಾನಂ ಲಿಂಗೇನ ಸಹ ಶುದ್ಧ ಧೀಃ
ಸಮಾದಾಯ ಸ್ವಯಂ ಪೀಠೇ ಸಂಸ್ಥಾಪ್ಯಾಹರಹರ್ಯಜೇತ್ ೭೦

---

ಸೂ. ೬೭. ಲಿಂಗಾಂಗಿಯು ಅವಸಾನಕಾಲದಲ್ಲಿ ಪ್ರಾಣಸಹಿತಾತ್ಮನಾಗಿ ತನ್ನ ಸ್ಥೂಲದೇಹವನ್ನು ಬಿಟ್ಟು ಸಚ್ಚಿದಾನಂದಸ್ವರೂಪವಾದಿಷ್ಟಲಿಂಗದಲ್ಲಿ ಪ್ರವೇಶಿಸುವನು. ಆದುದರಿಂದ ಅವನು ಪೃಥ್ವೀಮಯವಾದಿಷ್ಟಲಿಂಗ ಸಹಿತವಾದ ಪಾರ್ಥಿವಶರೀರದಿಂದ ವಿಯುಕ್ತನಾಗುವನು.

ಸೂ. ೬೮. ಶಾಂತಚಿತ್ತನಾದ ಲಿಂಗಾಂಗಿಯು ಅವಸಾನಕಾಲದಲ್ಲಿ ಸ್ವತಃ ತನ್ನಿಷ್ಟಲಿಂಗದಲ್ಲಿ ಸಮರ್ಪಿತಪ್ರಾಣವುಳ್ಳವನಾಗಿ ಸುಗುಪ್ತನಾಗಿರುವನು. ಆದುದರಿಂದ ಅವನು ಪೃಥ್ವೀಮಯವಾದ ಲಿಂಗದಿಂದ ಸಹಿತವಾದ ಪಾರ್ಥಿವಶರೀರದಿಂದ ಬಿಡುಗಡೆ ಹೊಂದುವನು.

ಸೂ. ೬೯. ಲಿಂಗೈಕ್ಯನಾದಮೇಲೆ ಅವನ ದೇಹವು ಮಾತ್ರ ವಿಧಿಗನುಸರಿಸಿ ಸಂಸ್ಕರಿಸಲು ಯೋಗ್ಯವು. ದೇಹದ ಮೇಲಿದ್ದ ಲಿಂಗವು ಸಂಸ್ಕರಿಸಲು ಯೋಗ್ಯವಲ್ಲ. ಆದುದರಿಂದ ಆ ಲಿಂಗವನ್ನು ತೆಗೆದುಕೊಂಡು ಬಂದು ಪೂಜಿಸಬೇಕು.

ಸೂ. ೭೦. ಶುದ್ಧ ಬುದ್ಧಿಯುಳ್ಳವನು ( ಶಿಷ್ಯನು ) ಲಿಂಗಸ್ಥಿತನಾದ ಲಿಂಗೈಕ್ಯನನ್ನು ಇಷ್ಟಲಿಂಗದೊಡನೆ ತೆಗೆದುಕೊಂಡು ಬಂದು ಸ್ವತಃ ಪೀಠದಲ್ಲಿಟ್ಟು ಪ್ರತಿದಿವಸ ಪೂಜಿಸಬೇಕು.

ಧಾರಯೇದ್ವಾ ಸದಾ ಲಿಂಗಂ ಗುರುಣಾ ಸಹ ಸಂಸ್ಥಿತಂ
ನಿಕ್ಷಿಪ್ತಸ್ಯ ನ ನಿಕ್ಷೇಪಃ ಶಿವಲಿಂಗೇ ಶಿವಾತ್ಮನಃ ೭೧

ನ ದಾಹೋಽಪಿ ಸ್ವಯಂಜ್ಯೋತಿರ್ಲಿಂಗಲೀನಸ್ಯ ಕಿಂ ಪುನಃ
ಯಥಾ ದೇಹಸ್ಥಮಾತ್ಮಾನಂ ಗೋಪ್ತುಂ ದಗ್ಧುಂ ನ ಶಕ್ಯತೇ
ತಥಾ ಲಿಂಗಸ್ಥಮಾತ್ಮಾನಮಿತಿ ತತ್ತ್ವವಿದಾಂ ಸ್ಥಿತಿಃ ೭೨

ಅಗೋಪ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ೭೩

ವಿಸೃಷ್ಟಸ್ಯೈವ ದೇಹಸ್ಯ ಗೋಪನಂ ದಹನಂ ಹಿ ತತ್
ತಸ್ಮಾಲ್ಲಿಂಗಮುಪಾದೇಯಂ ಹೇಯೋ ದೇಹಃ ಸ್ವಭಾವತಃ
ದೇಹಂ ತ್ಯಕ್ತ್ವೈವ ಸಾಯುಜ್ಯಂ ಶೈವಮೇತೀತಿ ಹಿ ಶ್ರುತಿಃ ೭೪

---

ಸೂ. ೭೧. ಅಥವಾ ಲಿಂಗೈಕ್ಯನಾದ ಗುರುವಿನೊಡನೆ ಕೂಡಿದ ಆ ಇಷ್ಟಲಿಂಗವನ್ನು ಯಾವಾಗಲೂ ತನ್ನ ದೇಹದಲ್ಲಿ ಧರಿಸಿಕೊಳ್ಳಬೇಕು. ಶಿವಲಿಂಗದಲ್ಲಿ ನಿಕ್ಷಿಪ್ತನಾಗಿ ಲಿಂಗಸ್ವರೂಪಿಯಾದವನಿಗೆ ಪುನಃ ಭೂಮಿಯಲ್ಲಿ ನಿಕ್ಷೇಪವಿಲ್ಲ.

ಸೂ. ೭೨. ಸ್ವಯಂಜ್ಯೋತಿಃಸ್ವರೂಪವಾದ ಲಿಂಗದ ಮಧ್ಯದಲ್ಲಿ ಲೀನವಾದವನಿಗೆ ಪುನಃ ದಹನಕಾರ್ಯವಾದರೂ ಇಲ್ಲ. ಹೇಗೆ ದೇಹದಲ್ಲಿರುವ ಆತ್ಮನ ಗೋಪನಮಾಡಲಿಕ್ಕೂ ದಹನಮಾಡಲಿಕ್ಕೂ ಶಕ್ಯವಿಲ್ಲವೋ; ಹಾಗೆ ಲಿಂಗಲೀನವಾಗಿರುವ ಗುರುವಿನಾತ್ಮನು ಪುನಃ ನಿಕ್ಷೇಪಕ್ಕಾಗಲಿ ದಹನಕ್ಕಾಗಲಿ ಯೋಗ್ಯನಲ್ಲವೆಂಬುದೇ ತತ್ತ್ವಜ್ಞರ ಅಭಿಪ್ರಾಯ.

ಸೂ. ೭೩. ಶಿವಸ್ವರೂಪವನ್ನು ಹೊಂದಿದ ಆತ್ಮನು, ಅಗೋಪ್ಯನೂ, ಅದಾಹ್ಯನೂ, ಅಕ್ಲೇದ್ಯನೂ, ಅಶೋಷ್ಯನೂ, ನಿತ್ಯನೂ ಆಗಿ ಸರ್ವಗತನಾಗಿರುವನು. ಮತ್ತು ಸ್ಥಾಣುವಾಗಿರುವುದರಿಂದ ಅಚಲನೂ ಸನಾತನನೂ ಆಗಿರುವನು. (ಆದುದರಿಂದ ಇಷ್ಟಲಿಂಗಲೀನವಾದ ಗುರುವಿನಾತ್ಮವು ಗೋಪ್ಯವೂ ದಾಹ್ಯವೂ ಆಗಲಾರದೆಂದು ತಾತ್ಪರ್ಯ).

ಸೂ. ೭೪. ಲಿಂಗಲೀನವಾದ ಗುರುವಿನಿಂದ ಬಿಡಲ್ಪಟ್ಟ ದೇಹಕ್ಕೆ ಮಾತ್ರ ಗೋಪನವೂ ದಹನವೂ ಯೋಗ್ಯ. ಆದುದರಿಂದ ದೇಹಗತ-

ವರ್ತಿಶ್ಚ ದೀಪಮೂಲಂಚ ದೀಪಾಗ್ರಂ ಚೇತಿ ತತ್ತ್ವತಃ
ದೃಷ್ಟಾಂತೋ ದೃಶ್ಯತೇ ಲೋಕೇ ಜೀವೇಶೈಕ್ಯಪದಂ ಪ್ರತಿ ೭೫

ವರ್ತಿಃ ಕಾಯೋ ದೀಪಮೂಲಂ ಜೀವೋ ದೀಪಾಗ್ರ ಈಶ್ವರಃ
ತಾಮಸೋ ರಾಜಸಃ ಪ್ರೋಕ್ತಃ ಸಾತ್ವಿಕಃ ಕ್ರಮಶಸ್ತ್ರಯಃ ೭೬

ಕಾಯೋ ಜಡೋ ಹಿ ಜೀವಃ ಸ್ಯಾಜ್ಜಡಾಜಡಸಮಾಹ್ವಯಃ
ಅಜಡಃ ಪರಮೇಶಾನಸ್ತಯೋರೈಕ್ಯಂ ಜಡಂ ವಿನಾ ೭೭

ನ ಭೇದೋ ವರ್ತಿಸಂತ್ಯಾಗೇ ದೀಪಮೂಲಾಗ್ರಯೋರ್ಯಥಾ
ನ ಜೀವೇಶ್ವರಯೋರ್ಭೇದೋ ದೇಹತ್ಯಾಗೇ ತಥೈವ ಹಿ ೭೮

---

ವಾದ ಲಿಂಗವು ಉಪಾದೇಯ (ಸ್ವೀಕರಿಸಲು ಯೋಗ್ಯ) ವಾಗಿರುವುದು. ದೇಹವು ಸ್ವಾಭಾವಿಕವಾಗಿ ಹೇಯ (ತ್ಯಜಿಸಲು ಯೋಗ್ಯ) ವಾಗಿರುವುದು. ಆತ್ಮನು ದೇಹವನ್ನು ತ್ಯಜಿಸಿಯೇ ಶಿವಸಾಯುಜ್ಯವನ್ನು ಹೊಂದುವನೆಂದು ಶ್ರುತಿಯಿರುವುದು. ಆದುದರಿಂದ ದೇಹವು ತ್ಯಾಜ್ಯವಾಗಿರುವುದು.

ಸೂ. ೭೫, ೭೬. ಜೀವ, ಶಿವ ಇವರ ಸಾಮರಸ್ಯವನ್ನು ಕುರಿತು ಲೋಕದಲ್ಲಿ ಬತ್ತಿ, ದೀಪಮೂಲ ಮತ್ತು ದೀಪಾಗ್ರಭಾಗ - ಇವುಗಳ ದೃಷ್ಟಾಂತವಿರುವುದು (೭೫). ಬತ್ತಿಯು ದೇಹದಂತಿರುವುದು. ದೀಪ-ಮೂಲದಂತೆ ಜೀವನಿರುವನು. ದೀಪಾಗ್ರದಂತೆ ಶಿವನಿರುವನು; ಮತ್ತು ಬತ್ತಿ, ಜೀವ, ಶಿವ - ಈ ಮೂರು ಕ್ರಮವಾಗಿ - ತಾಮಸ, ರಾಜಸ, ಸಾತ್ವಿಕವೆಂದು ಉಕ್ತವಾಗಿರುವವು (೭೬).

ಸೂ. ೭೭, ೭೮. ದೇಹವು ಜಡವು. ದೇಹಸಹಿತನಾದ ಜೀವನು ಜಡಾಜಡನು. ಶಿವನು ಅಜಡನು. ಜಡವಾದ ದೇಹವನ್ನು ಬಿಟ್ಟು ಅಜಡರಾದ ಜೀವಾತ್ಮ-ಪರಮಾತ್ಮರ ಐಕ್ಯವುಂಟಾಗುವುದು (೭೭). ಬತ್ತಿ-ಯನ್ನು ಬಿಟ್ಟರೆ ಹೇಗೆ ದೀಪಮೂಲದೀಪಾಗ್ರಗಳಿಗೆ ಭೇದವಿರುವುದಿಲ್ಲವೋ; ಹಾಗೆ ದೇಹವನ್ನು ತ್ಯಜಿಸಿದಾಗ ಜೀವಾತ್ಮ-ಪರಮಾತ್ಮರಿಗೆ ಭೇದವಿರುವು-ದಿಲ್ಲ. (ಅವರುಭಯರ ಐಕ್ಯವುಂಟಾಗುವುದೆಂದು ಭಾವವು) (೭೮).

ಲಿಂಗಂ ನ ನಿಕ್ಷಿಪೇದ್ಭೂಮೌ ದೇಹೇನ ಸಹ ಭಕ್ತಿಮಾನ್
ನಿಕ್ಷಿಪೇದ್ಯದಿ ಮೋಹೇನ ದೋಷಾಯ ಭವತಿ ಧ್ರುವಂ ೭೯

ತಥಾಪಿ ಯುಕ್ತಂ ಯುಕ್ತೇಷು ವಿಯುಕ್ತಂ ಕರ್ಮ ಕರ್ಮಸು
ಅತೋ ಲಿಂಗಾಂಗಯುಕ್ತಸ್ಯ ಷಟ್‌ಸ್ಥಲಬ್ರಹ್ಮವರ್ಚಸಃ ೮೦

ಪಶೂನಾಮಿವ ತಸ್ಯೇಹ ನ ಕುರ್ಯಾದೌರ್ಧ್ವದೈಹಿಕಂ
ನಾಸ್ತಿ ಶಾವಂ ಯತಸ್ತಸ್ಯ ಸಜ್ಯಂತೇ ಸೂತಕಾದಯಃ ೮೧

ನೈವಾಶೌಚಂ ಪ್ರಸಜ್ಯೇತ ತತ್ಪುತ್ರಾದೇರ್ವಿಶೇಷತಃ
ಅಶುದ್ಧಿಃ ಕ್ಷಣಮಾತ್ರಾ ಚೇತ್ಸೋಽಪಿ ಸ್ನಾನಾತ್ಪಲಾಯತೇ ೮೨

---

ಸೂ. ೭೯. ಮೇಲೆ ವಿವರಿಸಿದ ವಿಚಾರದಿಂದ ಭಕ್ತಿಯುಳ್ಳವನು ಲಿಂಗೈಕ್ಯನಾದವನ ದೇಹದೊಡನೆ ಲಿಂಗವನ್ನು ಭೂಸಮಾಧಿಯಲ್ಲಿ ನಿಕ್ಷೇಪಿಸಬಾರದು. (ಎಂದು ಗೊತ್ತಾಗುವುದು.) ಮೋಹದಿಂದ ಲಿಂಗವನ್ನು ಸಮಾಧಿಯಲ್ಲಿಟ್ಟರೆ ನಿಶ್ಚಯವಾಗಿ ದೋಷಪ್ರಾಪ್ತಿಯಾಗುವುದು.

ಔರ್ಧ್ವದೈಹಿಕಕರ್ಮನಿಷೇಧಃ

ಸೂ. ೮೦, ೮೧. ಲಿಂಗೈಕ್ಯರಾದವರಿಗೆ ಮಾಡುವ ಯುಕ್ತಾಯುಕ್ತ ಕರ್ಮಗಳಲ್ಲಿ ಯುಕ್ತಕ್ರಿಯೆಯನ್ನು ಮಾತ್ರ ಮಾಡಬೇಕು. ಅಯುಕ್ತ-ಕರ್ಮವನ್ನು ಬಿಡಬೇಕು. ಆದುದರಿಂದ ಷಟ್‌ಸ್ಥಲಬ್ರಹ್ಮತೇಜವುಳ್ಳ ಲಿಂಗಾಂಗಯುಕ್ತನಿಗೆ (೮೦) ಲೋಕದಲ್ಲಿ ಪಾಶಬದ್ಧರಿಗೆ ಮಾಡುವಂತೆ ಔರ್ಧ್ವದೈಹಿಕ (ಶ್ರಾದ್ಧಾದಿ) ಕರ್ಮವನ್ನು ಮಾಡಬಾರದು. ಲಿಂಗೈಕ್ಯನಿಗೆ ಶವಸಂಬಂಧವಾದ ದೋಷವಿರುವುದಿಲ್ಲವಾದ ಕಾರಣದಿಂದ ಸೂತಕಾದಿ-ಗಳು ಬರುವುದಿಲ್ಲ (೮೧).

ಸೂ. ೮೨, ೮೩. ಲಿಂಗೈಕ್ಯನ ಪುತ್ರಾದಿಗಳಿಗೆ ಅಶೌಚವು ಪ್ರಾಪ್ತ-ವಾಗುವುದಿಲ್ಲ. ಕ್ಷಣಕಾಲ ಅಶುದ್ಧಿಯುಂಟಾದ ಪಕ್ಷದಲ್ಲಿ ಅದು ಸ್ನಾನ-ಕ್ರಿಯೆಯಿಂದ ತೊಲಗುವದು (೮೨). ಶಿವೈಕ್ಯನಾದ ಶಿವಯೋಗಿಗೆ

ನ ಚ ಶ್ರಾದ್ಧಾದಿಕಂ ಕರ್ಮ ನ ಪಿಂಡಂ ನೋದಕಕ್ರಿಯಾ
ನ ಕುರ್ಯಾತ್ ಪಾರ್ವಣಾದೀನಿ ಶಿವಭೂತಾಯ ಯೋಗಿನೇ ೮೩

ಅಥೈನಮಪಿ ಚೋದ್ದಿಶ್ಯ ಕರ್ಮ ಚೇತ್ಕರ್ತುಮೀಪ್ಸಿತಂ
ಕಲ್ಯಾಣಮೇವ ಕುರ್ವೀತ ಶಿವಭಕ್ತಾಂಶ್ಚ ತರ್ಪಯೇತ್ ೮೪

ಪ್ರತ್ಯಬ್ದಂ ಚ ತಮುದ್ದಿಶ್ಯ ಶಿವಭಕ್ತಾಂಶ್ಚ ಭೋಜಯೇತ್
ಭಕ್ತೇಭ್ಯೋ ದತ್ತಮನ್ನಂ ಯದ್ದತ್ತಮೇವ ಶಿವಾಯ ಹಿ
ಗುರುವದ್ಗುರುಭಾರ್ಯಾಯಾಂ ತತ್ಪುತ್ರೇಷು ಚ ವರ್ತಯೇತ್ ೮೫

ಶಿಷ್ಯಃ

ಗುರುಪದ ಷಟ್‌ಸ್ಥಲಾನುಭವಸೂತ್ರಕಲಾಪರಿಪೂರ್ಣಭಕ್ತಿಭಾ
ಗ್ಗುರುಪದಸತ್ಯ ಚಿದ್ಘನಪರಾತ್ಮಸುಖಾತಿಶಯಂ ಪ್ರಸನ್ನ ಸ
ದ್ಗುರುಪದಶಾಂಭವಪ್ರಹಿತನಾಮವಿಶಿಷ್ಟಗುಣೋಪಪನ್ನವಿ
ದ್ಗುರುಪದಚಿಂತನಸ್ಮೃತಿತಿರೋಹಿತಮಸ್ತು ವಪುಃ ಸಮಾರುತಂ ೮೬

---

ಶ್ರಾದ್ಧಾದಿ ಕರ್ಮವಿಲ್ಲ; ಪಿಂಡವೂ, ಉದಕಕ್ರಿಯೆಯೂ ಇಲ್ಲ. ಆತನಿಗೆ ಪಾರ್ವಣ ಶ್ರಾದ್ಧಾದಿಗಳನ್ನು ಮಾಡಬಾರದು (೮೩).

ಸೂ. ೮೪, ೮೫. ಲಿಂಗೈಕ್ಯನಾದವನನ್ನುದ್ದೇಶಿಸಿ ಕರ್ಮವನ್ನು ಮಾಡಬೇಕೆಂದಿಚ್ಛಿಸಿದ ಪಕ್ಷದಲ್ಲಿ ಕಲ್ಯಾಣಕರಕ್ರಿಯೆಯನ್ನೇ ಮಾಡಬೇಕು- ಎಂದರೆ- ಶಿವಭಕ್ತರಿಗೆ ಸಂತರ್ಪಣ ಮಾಡಬೇಕು (೮೪). ಪ್ರತಿವರ್ಷವೂ (ಲಿಂಗೈಕ್ಯ ದಿನದಲ್ಲಿ) ಲಿಂಗೈಕ್ಯನನ್ನುದ್ದೇಶಿಸಿ ಶಿವಭಕ್ತರಿಗೆ ಭೋಜನವನ್ನು ಮಾಡಿಸಬೇಕು. ಏಕೆಂದರೆ - ಶಿವಭಕ್ತರಿಗೆ ಅರ್ಪಿತವಾದ ಅನ್ನವು ಶಿವನಿಗೆ ಅರ್ಪಿತವಾಗುವುದು. ಲಿಂಗೈಕ್ಯನಾದ ಗುರುವಿನ ವಿಷಯದಲ್ಲಿ ವರ್ತಿಸಿದಂತೆ ಗುರುವಿನ ಸತಿಪುತ್ರರ ವಿಷಯದಲ್ಲಿಯೂ ವರ್ತಿಸಬೇಕು. (೮೫).

ಶಿಷ್ಯ. ಸೂ. ೮೬. ಪ್ರಾಣಯುಕ್ತವಾದ ನನ್ನ ಶರೀರವು - ಗುರುಪಾದದಿಂದ ಪ್ರಾಪ್ತವಾದ ಷಟ್‌ಸ್ಥಲಾನುಭವಸೂತ್ರಕಲೆಯಿಂದ ಪೂರ್ಣ-

ಲಿಂಗಂ ಸಾಕ್ಷಾತ್ಕರಸ್ಥಂ ಹಿಮಕರಶಿಖಿವದ್ವೀಕ್ಷಿತುಂ ವೀಕ್ಷಿತುಂ ಯ
ನ್ಮಂದಂ ಮಂದಂ ಸಮಂತಾದ್ಘನತರನಿಜತೇಜಃ ಪ್ರಭಾವಂ ಪ್ರಕುರ್ವನ್
ಜ್ಯೋತಿಃಸ್ತಂಭಾಕೃತಿಃ ಸನ್‌ವಪುರಿದಮವಗೃಣ್ಹಾತು ಶಂಭೋ ಮದೀಯಂ
ಪ್ರಾರಬ್ಧಸ್ಯಾವಸಾನೇ ಕೃಪಯ ಸುಕೃಪಯಾಚೇ ವರೋಽಯಂ ಮಮ್ಯೈವಂ ೮೭

ಶಂಭೋ ಶರೀರೇಣ ಸಹಾಹಮಸ್ಮಿನ್ ಲಿಂಗೇ ತ್ವದೀಯೇ ಪರಮ ಪ್ರಕಾಶೇ
ಲೀನೋ ಯಥಾ ಸ್ಯಾಂ ಕೃಪಯಾ ತಥೈವ ಪ್ರಾಯೋಽಂತಕಾಲೇ ಕುರುಮೇ ವರೋಽಯಂ ೮೮

---

ವಾದ ಭಕ್ತಿಯುಳ್ಳದ್ದಾಗಿಯೂ, ಗುರುಪದದಿಂದ ಲಬ್ಧವಾದ ಸತ್ಯಚಿದ್ಘನ ಪರಮಾತ್ಮಸುಖಾತಿಶಯವುಳ್ಳುದಾಗಿಯೂ, ಗುರುಪದಪ್ರಾಪ್ತವಾದ ಶಿವ-ಸಂಬಂಧಿ ಹಿತಕರ ನಾಮಗಳಿಂದ ಕೂಡಿದ ಸದ್ಗುಣಗಳಿಂದ ಕೂಡಿರುವು-ದನ್ನು ತಿಳಿದಿರುವುದಾಗಿಯೂ ಇದ್ದು, ಗುರುಪದಚಿಂತನಸ್ಮರಣಗಳಲ್ಲಿ ಅಡಗಿ ಹೋಗಲಿ.

ಸೂ. ೮೭. ಕೃಪಾಮಯನಾದ ಶಂಭುವೆ, ಪ್ರಾರಬ್ಧದವಸಾನದಲ್ಲಿ ನನ್ನ ಕರಸ್ಥಿತವಾದ ಯಾವ ಇಷ್ಟಲಿಂಗವನ್ನು ಸಾಕ್ಷಾತ್ತಾಗಿ ನಿರೀಕ್ಷಿಸುತ್ತಿರು-ವೆನೋ; ಆ ಲಿಂಗವು ನಿರೀಕ್ಷಣಸಮಯದಲ್ಲಿ ಕರ್ಪೂರದಿಂದ ಕೂಡಿದುರಿ-ಯಂತೆ ಮೆಲ್ಲಮೆಲ್ಲನೆ ಎಲ್ಲ ಕಡೆಯಿಂದಲೂ ತನ್ನ ಘನತರ ತೇಜಃ-ಪ್ರಭಾವವನ್ನುಂಟುಮಾಡಿಕೊಂಡು ತೇಜಃಸ್ತಂಭದಾಕಾರವನ್ನು ಹೊಂದಿ ನನ್ನ ಶರೀರವನ್ನು ತನ್ನೊಳಗು ಮಾಡಿಕೊಳ್ಳಲಿ. ಇದನ್ನೇ ಯಾಚಿಸು-ವೆನು. ಕೃಪೆಮಾಡು. ನಾನು ಬೇಡುವ ವರವೇ ಇದು.

ಸೂ. ೮೮. ಶಂಭುವೆ ನೀನು ಕೃಪೆಯಿಟ್ಟು ನಿನ್ನ ಸಂಬಂಧವಾಗಿರುವ ಪರಮಪ್ರಕಾಶರೂಪವಾದೀ ಇಷ್ಟಲಿಂಗದಲ್ಲಿ ಬಹಳಮಟ್ಟಿಗೆ ಅವಸಾನ-ಕಾಲದಲ್ಲಿ ನಾನು ಶರೀರದೊಡನೆ ಅಡಗುವಂತೆ ಮಾಡು, ಇದೇ ನಾನು ಕೇಳುವ ವರವು.

ಸ್ವಯಂ ಪ್ರಕಾಶೇ ಪರಮಾತ್ಮಲಿಂಗೇ ಕರಸ್ಥಲಸ್ಥೇ ಮಮ ದೇಹ ಏಷ
ತಿರೋಹಿತಃ ಸ್ಯಾದಿಹ ಚಿತ್ರಹೇತೌ ಕೃಪೀಟಯೋನಾವಿವ.

ಹೈಮಖಂಡಃ ೮೯

ಕಾಯಃ ಕರಸ್ಥಲಂ ಪ್ರೋಕ್ತೋ ಜೀವಃ ಸ್ಯಾನ್ನಯನಸ್ಥಲಂ
ಕಾಯಜೀವದ್ವಯೋಸ್ಸಂಧಿರ್ಲಿಂಗಮಿತ್ಯಭಿಧೀಯತೇ ೯೦

ಕರ್ಪೂರನಿರ್ಮಲಸುಗಂಧಿ ಶಿವಾಂಗಮಸ್ಮಿನ್ ವಿನ್ಯಸ್ತಶಸ್ತ-
ಸಹಜಪ್ರಭದೀಪರೂಪಂ
ಲಿಂಗಂ ಮಮೈತದುಭಯಂ ನಿಜಭಕ್ತಿಯೋಗಾದಂತೇ
ಮಹಾಗುರುಪದೇ ಪ್ರವಿಲೀನಮಸ್ತು ೯೧

ಭಕ್ತಪ್ರಸಾದಿಶರಣಸ್ಥಲವರ್ತಮಾನೇಷ್ವೇತೇಷು ಚತ್ರಿಷು
ವೃಷಾಂಕಪುರಃ ಸರೇಷು
ಪೃಥ್ವ್ಯಂಗಪಾವಕಕಲಾಂಗನಭೋಂಗಚಿಹ್ನೇಷ್ವಾಶಾಸ್ಮಹೇ
ಘನತರಂ ಕರುಣಾ ಪ್ರಸಾದಂ ೯೨

---

ಸೂ. ೮೯. ಕರಸ್ಥಲದಲ್ಲಿರುವ ಸ್ವಯಂ ಪ್ರಕಾಶಮಯವಾದ ಶಿವಲಿಂಗದಲ್ಲಿ ನನ್ನ ದೇಹವಿದು ಅವಸಾನಕಾಲದಲ್ಲಿ ಆಶ್ಚರ್ಯಕಾರಣವಾದ ಅಗ್ನಿಯಲ್ಲಿ ಕರ್ಪೂರದ ತುಂಡು ಅಡಗುವಂತೆ ಅಡಗಲಿ.

ಸೂ. ೯೦. ಕರಸ್ಥಲವೇ ಕಾಯವಾಗಿರುವುದು. ನೇತ್ರಸ್ಥಲವೇ ಜೀವನಾಗಿರುವನು. ಕಾಯಜೀವರುಗಳ ಸಂಗಮಸ್ಥಲವೇ ಲಿಂಗವೆನಿಸುವುದು.

ಸೂ. ೯೧. ಶಿವಾಂಗವೆನಿಸಿದ ನನ್ನ ಶರೀರವು ಕರ್ಪೂರನಿರ್ಮಲ ಸುಗಂಧವುಳ್ಳದಾಗಿರುವುದು. ಇಷ್ಟಲಿಂಗವು ಶಿವಾಂಗದಲ್ಲಿ ಇರಿಸಲ್ಪಟ್ಟ ಪ್ರಶಸ್ತವೂ ಸಹಜವೂ ಆದ ಪ್ರಭಾಮಯದೀಪರೂಪವಾಗಿರುವುದು. ನನ್ನೀ ಅಂಗಲಿಂಗಗಳೆರಡು ನಿಜಭಕ್ತಿಯೋಗದಿಂದ ಅವಸಾನಕಾಲದಲ್ಲಿ ಮಹಾಗುರುಪಾದದಲ್ಲಿ ಲೀನವಾಗಲಿ.

ಬಸವಚೆನ್ನಬಸವಾಲ್ಲಮರ ಸ್ತೋತ್ರ

ಸೂ. ೯೨. ಕ್ರಮವಾಗಿ - ಪೃಥ್ವ್ಯಂಗ - ಪಾವಕಾಂಗ - ಆಕಾಶಾಂಗವಾಗಿರುವ ಭಕ್ತ - ಪ್ರಸಾದಿ - ಶರಣಸ್ಥಲಗಳಲ್ಲಿರುವ ಬಸವ - ಚೆನ

ಭಕ್ತಿಸ್ಥಲಪರಿಣಾಮೋ ಮಹೇಶ್ವರಸ್ಥಲಮುಭಯೋಃ ಸ್ಥಲೇ ತದ್ವತ್
ಪ್ರಸಾದಿಶರಣಸ್ಥಲಯೋಃ ಪರಿಣಾಮಃ ಪ್ರಾಣಲಿಂಗೈಕ್ಯಃ ೯೩

ಆಚಾರಲಿಂಗ ಪರಿಣಾಮಪದಂ ಗುರುಃ ಸ್ಯಾಚ್ಛೈವಾಖ್ಯಲಿಂಗ
ಪರಿಣಾಮಪದಂ ಚರಃಸ್ಯಾತ್
ಪ್ರಾಸಾದಲಿಂಗಪರಿಣಾಮಪದಂ ಮಹತ್ ಸ್ಯಾದೇವಂ
ಸ್ಥಲಾನಿ ಷಡಿಮಾನಿ ಜಗಾದವೇದಃ ೯೪

ಆಚಾರಲಿಂಗ ಶಿವಲಿಂಗ ಮಹಾಪ್ರಸಾದಲಿಂಗತ್ರಯೇ
ತ್ರಿವಿಧಮಂಗಮಿದಂ ನಿವೇದ್ಯ
ಲಿಂಗಾಂಗಿನಃ ಪರತರಾಂ ಪದವೀಮವಾಪುರೇತಂ ವೃಣೋಮಿ
ಪರಮಂ ಕರುಣಾ ಪ್ರಸಾದಂ ೯೫

---

ಬಸವ - ಅಲ್ಲಮಪ್ರಭುವೆಂಬ ಮೂವರಲ್ಲಿ ಅವರ ಘನತರವಾದ ಕೃಪಾ-ಪ್ರಸಾದವನ್ನು ಆಶಿಸುವೆನು.

ಸೂ. ೯೩, ೯೪. ಭಕ್ತಸ್ಥಲಪರಿಣಾಮವೇ (ಫಲವೇ) ಮಹೇಶ್ವರ ಸ್ಥಲವು. ಪ್ರಸಾದಿಸ್ಥಲದ ಪರಿಣಾಮವೇ ಪ್ರಾಣಲಿಂಗಿಸ್ಥಲವು. ಶರಣ ಸ್ಥಲದ ಪರಿಣಾಮವೇ ಐಕ್ಯಸ್ಥಲವು (೯೩). ಆಚಾರಲಿಂಗಪರಿಣಾಮ-ಸ್ಥಾನವು ಗುರುಲಿಂಗ. ಶಿವಲಿಂಗದ ಪರಿಣಾಮಸ್ಥಾನವು ಜಂಗಮಲಿಂಗ. ಪ್ರಸಾದಲಿಂಗ ಪರಿಣಾಮಸ್ಥಾನವು ಮಹಾಲಿಂಗ (೯೪).

ಸೂ. ೯೫. ಲಿಂಗಾಂಗಿಗಳು ಆಚಾರಲಿಂಗ, ಶಿವಲಿಂಗ, ಮಹಾಲಿಂಗ ವೆಂಬ ತ್ರಿವಿಧಲಿಂಗದಲ್ಲಿ ಕ್ರಮವಾಗಿ ತ್ಯಾಗ-ಭೋಗ-ಯೋಗವೆಂಬ ತ್ರಿವಿಧಾಂಗವನ್ನು ಅರ್ಪಿಸಿ, ಪರತರವಾದ ಸಾಮರಸ್ಯಪದವಿಯನ್ನು ಹೊಂದಿದರು. ಆ ಪದವಿಯನ್ನು ಹೊಂದುವೀ ಕೃಪಾಪ್ರಸಾದವನ್ನು ನಾನು ಅಪೇಕ್ಷಿಸುವೆನು.

ಪಾರ್ಥಿವಕಾಯೋ ವೃಷಭಸ್ತೈಜಸಕಾಯಸ್ತು ಚನ್ನವೃಷರಾಜಃ
ವ್ಯೋಮಕಾಯೋಽಲ್ಲಮವಿಭುರಿತ್ಯೇಷಾಂ ಕಾಯಭೇದ ಉಪದಿಷ್ಟಃ ೯೬

ಭೂಮ್ಯಂಬ್ವಗ್ನಿ ಮರುದ್ವಿಯತ್ಸುಗುಣಭೇದಸ್ತಾರತಮ್ಯಕ್ರಮಾತ್
ಪ್ರೋಕ್ತೋ ಮೂರ್ತಿವಿಶೇಷತೊ ಬಹಿರಥಾಂತರ್ಲಿಂಗಮೂರ್ತಿಃ ಪರಃ
ಸೂತ್ರಾತ್ಮಾ ಗುಣಭೇದವರ್ಜಿತತಯಾಽಸ್ತೇ ನಿರ್ವಿಕಲ್ಪಃ ಸ್ವಯ
ಮೇತೇಷು ಕ್ರಮತಾರತಮ್ಯರಹಿತೋ ಮೂರ್ತಾವಕಾಶದ್ವಯಃ ೯೭

ಮೃತ್ಪಿಂಡಮೇಘೋಪಲವಿಸ್ಫುಲಿಂಗವಾತೇಂದ್ರಚಾಪಾಸ್ತನವಃ ಕ್ರಮೇಣ
ಸ್ಯುಃ ಪಾರ್ಥಿವಾಪ್ಯಾಮಲತೈಜಸಾಖ್ಯಾ ವಾಯ್ವಂತರಿಕ್ಷಾ-
ಹ್ವಯಭೇದಭಿನ್ನಾಃ ೯೮

---

ಸೂ. ೯೬. ಬಸವೇಶ್ವರನು ಪಾರ್ಥಿವಕಾಯನು. ಚೆನ್ನಬಸವೇಶ್ವರನು ತೈಜಸಕಾಯನು. ಅಲ್ಲಮಪ್ರಭುವು ವ್ಯೋಮಕಾಯನು. ಹೀಗೆಂದು ಈ ಮೂವರ ಕಾಯಭೇದವು ಉಪದಿಷ್ಟವಾಗಿರುವುದು.

ಸೂ. ೯೭. ಭೂಮಿ, ಜಲ, ಅಗ್ನಿ, ವಾಯು, ಆಕಾಶ ಈ ಐದರ ಬಹಿರ್ಭಾಗದಲ್ಲಿ ಮೂರ್ತಿವಿಶೇಷದಿಂದುಂಟಾದ ತಾರತಮ್ಯ ಕ್ರಮದಿಂದ ಗುಣಭೇದವು ಉಕ್ತವಾಗಿರುವುದು. ಈ ಐದು ಭೂತಗಳ ಅಂತರ್ಭಾಗದಲ್ಲಿ (ಪಾಂಚಭೌತಿಕಶರೀರದೊಳಗೆ) ಶ್ರೇಷ್ಠನೂ, ಸೂತ್ರಾತ್ಮನೂ, ನಿರ್ವಿಕಲ್ಪನೂ, ಕ್ರಮತಾರತಮ್ಯರಹಿತನೂ, ಮೂರ್ತಾಮೂರ್ತದ್ವಯಸ್ವರೂಪನೂ ಆಗಿರುವ ಲಿಂಗಮೂರ್ತಿಯು ಗುಣಭೇದವರ್ಜಿತನಾಗಿ ತಾನು ನೆಲಸಿರುನು.

ಸೂ. ೯೮. ದೇಹಗಳು, ಭೂಮಿ, ಜಲ, ಅಗ್ನಿ; ವಾಯು, ಆಕಾಶ ವೆಂಬ ನಾಮಭೇದದಿಂದ ಭಿನ್ನಗಳಾಗಿ - ಮೃತ್ಪಿಂಡ (ಮಣ್ಣಿನ ಮುದ್ದೆ) ಮೇಘೋಪಲ (ಆಣೆಕಲ್ಲು) ವಿಸ್ಫುಲಿಂಗ (ಕಿಡಿ) ವಾತ (ಗಾಳಿ) ಇಂದ್ರಚಾಪ (ಕಾಮನಬಿಲ್ಲು) ಇವುಗಳ ರೂಪದಿಂದ ತೋರುವವು. (ಹೀಗೆ) ತೋರಿ ಭೂಮ್ಯಾದಿಪಂಚಭೂತಗಳಲ್ಲಿ ಅಡಗುವವು.

ಏವಂ ಲಿಂಗಶರೀರಂ ಸ್ಯಾತ್ಪರನಿರ್ವಾಣಲಕ್ಷಣಂ
ತದ್ಭಾವಭಾವಿತಂ ಸಾಕ್ಷಾತ್ಚರಿತ್ರಂ ಪವಿತ್ರಕಂ ೯೯

ಗುರುಃ

ಗುರುಚರಶಿವಮೂರ್ತಿನಾಂ ತ್ರಯಾಣಾಮಮೀಷಾಂ
ನಿರತಿಶಯಕೃಪಾವಾಪ್ತಪ್ರಸಾದಾನುಭೂತ್ಯಾ
ವರಪರಮರಹಸ್ಯಂ ಶ್ರೀಮದಾಚಾರ್ಯಶಿಷ್ಯೋತ್ತರಘನತರ
ಸಂವಾದಾರ್ಥಯುಕ್ತಂ ಮಯೋಕ್ತಂ ೧೦೦

ಗುರುಚರಣಂ ಭವಹರಣಂ ಶರಣಹೃದಾಭರಣಮಾತ್ಮಸುಖಕರಣಂ
ಮರಣಭಯಾದುತ್ತರಣಂ ತರುಣಾರುಣಕಿರಣವರಣಮಹಮೀಡೇ ೧೦೧

ಭಕ್ತಿಮೇವ ಪರಾಂ ದೇಹಿ ತ್ವತ್ಪದೇ ನಿಶ್ಚಲಾಂ ಮಮ
ಸೋಮೇಶ್ವರ ಕೃಪಾಮೂರ್ತೇ ನಾನ್ಯದಿಚ್ಛಾಮ್ಯತಃ ಪರಂ ೧೦೨

---

ಸೂ. ೯೯. ಹೀಗೆ ಲಿಂಗಾಂಗಿಯ ಲಿಂಗಮಯ ಶರೀರವು ಶ್ರೇಷ್ಠವಾದ ಸಾಮರಸ್ಯಲಕ್ಷಣದಿಂದ ಕೂಡಿದುದಾಗಿರುವುದು. ಈ ಲಿಂಗಶರೀರ ಭಾವನೆಯಿಂದ ಭಾವಿತವಾದ ತಲ್ಲಿಂಗಮಯ ಚರಿತ್ರವು ಪರಮ ಪವಿತ್ರವಾಗಿರುವುದು.

ಗುರು. ಸೂ. ೧೦೦. ಗುರುಚರಲಿಂಗಮೂರ್ತಿಗಳಾದೀ ಮೂವರ ನಿರತಿಶಯ ಕೃಪಾಲಬ್ಧವಾದ ಪ್ರಸಾದರೂಪಾನುಭವದಿಂದ ಗುರುಶಿಷ್ಯರ ಘನತರಸಂವಾದಾರ್ಥದಿಂದ ಕೂಡಿದ ಪರಮರಹಸ್ಯವುಳ್ಳ ಈ ಗ್ರಂಥವು ನನ್ನಿಂದ ಉಕ್ತವಾಗಿರುವುದು.

ಸೂತ್ರಕಾರನ ಸ್ತೋತ್ರಗಳು

ಸೂ. ೧೦೧. ಭವಹರಣವೂ, ಶರಣರ ಹೃದಯಾಭರಣವೂ, ಆತ್ಮಸುಖಕರಣವೂ, ಮರಣಭಯೋತ್ತರಣವೂ, ತರುಣಸೂರ್ಯನ ಕಿರಣ ದಂತಿರುವ ಕಿರಣದಿಂದ (ಕಾಂತಿಯಿಂದ) ಸುತ್ತುವರಿದುದೂ ಆದ ಗುರುಚರಣವನ್ನು ನಾನು ಸ್ತುತಿಸುವೆನು.

ಸೂ. ೧೦೨. ಕೃಪಾಮೂರ್ತಿಯಾದ ಸೋಮೇಶ್ವರನೆ, ನಿನ್ನ ಪಾದದಲ್ಲಿ ಇರಿಸುವ ನಿಶ್ಚಲವಾದ ಮತ್ತು ಶ್ರೇಷ್ಠವಾದ ಭಕ್ತಿಯನ್ನೇ ನನಗೆ ಕೊಡು; ಅದರ ಮೇಲೆ ಮತ್ತಾವುದನ್ನೂ ಇಚ್ಛಿಸುವುದಿಲ್ಲ.

ಯದ್ವದಜ್ಞಾತಮಜ್ಞಾತಂ ಸರ್ವಂ ಚ ಜ್ಞಾತಮಂತರಾ
ತದ್ವತ್ತ್ವದನ್ಯತ್ ಸಕಲಮಜ್ಞಾತಂ ಸ್ಯಾದುಮೇಶ ಮೇ ೧೦೩

ಹಿತಾಹಿತಂ ನಜಾನಾಮಿ ಯತ್ಕಿಂಚಿದಪಿ ಭೋ ಪ್ರಭೋ
ತ್ವಮೇವ ವೇತ್ಸಿ ತತ್ಸರ್ವಂ ಯದ್ಧಿತಂ ತತ್ಕುರುಷ್ವ ಮೇ ೧೦೪

ಏತದೇವ ವರೋಽಸ್ಮಾಕಮೇತದೇವ ವೃಣೀಮಹೇ
ಏತದೇವಾದಿಶ ಸ್ವಾಮಿನ್ ಸೋಮೇಶ್ವರ ನಿರಂತರಂ ೧೦೫

ಕೃಪಾಲಯ ಕೃಪಾರಾಮ ಕೃಪಾಕರ ಕೃಪಾನಿಧೇ
ಕೃಪಾಸಿಂಧೋ ಕೃಪಾಬಂಧೋ ಕೃಪಾಭರಣ ಪಾಹಿ ಮಾಂ ೧೦೬

---

ಸೂ. ೧೦೩. ಉಮೇಶನೆ, ಲೋಕದಲ್ಲಿ ತಿಳಿಯದುದೆಲ್ಲವನ್ನು ತಿಳಿಯದ ಹೊರತು ಅದು ಹೇಗೆ ಅಜ್ಞಾತವಾಗಿ ಉಳಿಯುವುದೋ; ಹಾಗೆ ನಿನ್ನನ್ನು ತಿಳಿಯುವುದನ್ನು ಬಿಟ್ಟು, ಉಳಿದುದೆಲ್ಲವೂ ನನಗೆ ಅಜ್ಞಾತವಾಗಿಯೇ ಇರಲಿ.

ಸೂ. ೧೦೪. ಪ್ರಭುವೆ, ಹಿತವಾವುದು ಅಹಿತವಾವುದೆಂಬುದನ್ನು ಸ್ವಲ್ಪವಾದರೂ ನಾನು ತಿಳಿದಿಲ್ಲ. ಅದೆಲ್ಲವನ್ನೂ ನೀನು ತಿಳಿದಿರುವಿ. ಯಾವುದು ನನಗೆ ಹಿತವೋ ಅದನ್ನು ನೀನು ಮಾಡು.

ಸೂ. ೧೦೫. ಮೇಲೆ ಕೇಳಿಕೊಂಡುದೇ ನಮಗೆ ವರವಾಗಿರುವುದು. ಇದನ್ನೇ ನಾವು ಇಚ್ಛಿಸುವೆವು. ಸ್ವಾಮಿಯಾದ ಸೋಮೇಶ್ವರನೆ, ಈ ವರವನ್ನೇ ಯಾವಾಗಲೂ ಕರುಣಿಸು.

ಸೂ. ೧೦೬. ಕೃಪಾಮಂದಿರನೂ, ಕೃಪಾರಾಮನೂ, ಕೃಪಾಕರನೂ, ಕೃಪಾನಿಧಿಯೂ, ಕೃಪಾಸಿಂಧುವೂ, ಕೃಪಾಬಂಧುವೂ, ಕೃಪಾಭರಣನೂ ಆದ ಸ್ವಾಮಿಯೆ, ನನ್ನನ್ನು ಪಾಲಿಸು.

ಸಂಸಾರಬಂಧವಿಚ್ಛೇದಕರಜ್ಞಾನಾಸ್ತ್ರದಪ್ರಭೋ
ಶ್ರೀಮದ್ವೈಪುರಸೋಮೇಶ ನಮಸ್ತೇ ಷಟ್‌ಸ್ಥಲಾತ್ಮನೇ ೧೦೭

ಇತಿ ಪೂರ್ವೋತ್ತರಭಾಗದ್ವಯಸಮುಚಿತಮೇತದಭಿಹಿತಂ ವಿಹಿತಂ
ಶಿವಸಿದ್ಧಾಂತಂ ತಂತ್ರಂ ಶಿವಾನುಭವಸೂತ್ರಮತ್ರ ಸಂಪೂರ್ಣಂ ೧೦೮

---

ಸೂ. ೧೦೭. ಸಂಸಾರಬಂಧವನ್ನು ಭೇದಿಸುವ ಜ್ಞಾನಾಸ್ತ್ರವನ್ನು ಪ್ರದಾನಮಾಡುವ ಪ್ರಭುವೆ, ಷಟ್‌ಸ್ಥಲಾತ್ಮನಾದ ಶ್ರೀಮದ್ವೈಪುರಸೋಮೇಶ್ವರನೆ, ನಿನಗೆ ನಮಸ್ಕಾರ.

ಸೂ. ೧೦೮. ಹೀಗೆ ನನ್ನಿಂದ ಉಕ್ತವಾದ ಪೂರ್ವೋತ್ತರಭಾಗದ್ವಯದಿಂದ ಕೂಡಿದ ಯೋಗ್ಯವಾದ ಶಿವಸಿದ್ಧಾಂತತಂತ್ರವೆಂಬ ಶಿವಾನುಭವಸೂತ್ರವು ಇಲ್ಲಿಗೆ ಸಂಪೂರ್ಣವು.

ವಿಚಾರ :

ಪಂಚಮಾಧಿಕರಣದಲ್ಲಿ ವಿವರಿಸಿದ ದೇಹಾವಸಾನದ ಮುಖ್ಯ ವಿಷಯಗಳು ಕೆಳಗಿನಂತಿರುವವು.

(೧) ಶರೀರಸ್ಥಿತನಾದ ಜೀವನು ಜಡಾಜಡಸ್ವರೂಪನಾಗಿರುವನು. ಜೀವನ ಶರೀರವು ಜಡವಾಗಿರುವುದು. ಶರೀರದಲ್ಲಿರುವ ಜೀವಾತ್ಮನು ಅಜಡನಾಗಿರುವನು. ಜಡಶರೀರವು - ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚತತ್ತ್ವಗಳಿಂದ ಕೂಡಿರುವುದು. ಜೀವನು ಆತ್ಮತತ್ತ್ವಸ್ವರೂಪನಾಗಿರುವನು. ಆದುದರಿಂದ ದೇಹಾವಸಾನದಲ್ಲಿ ಪೃಥ್ವ್ಯಾದಿಯಾದ ಆರು ತತ್ತ್ವಗಳಿಗನುಸರಿಸಿ, ತಾತ್ವಿಕದೃಷ್ಟಿಯಿಂದ ಖನನಾದಿಯಾದ ಆರು ಉಪಾಯಗಳು ಉಕ್ತವಾಗಿರುವವು. ಖನನೋಪಾಯದಂತೆ ದಹನಾದ್ಯುಪಾಯಗಳು ತತ್ತ್ವದೃಷ್ಟಿಯಿಂದ ಯೋಗ್ಯವೆನಿಸಿದ್ದರೂ ಸೂತ್ರಕಾರನು ಖನನೋಪಾಯವೇ (ಭೂಸಮಾಧಿಯೇ) ಬಲವತ್ತರವಾದುದೆಂಬಭಿಪ್ರಾಯವನ್ನು ವ್ಯಕ್ತಪಡಿಸಿರುವನು. ಸಂಪ್ರದಾಯದಲ್ಲಿಯೂ ಖನನವೇ (ಸಮಾಧಿಯೇ) ರೂಢವಾಗಿರುವುದು.

(೨) ಲಿಂಗಾಂಗಿಗಳಿಗೆ ದೇಹಾವಸಾನಕಾಲದಲ್ಲಿ ಸೂತಕವಿಲ್ಲ. ಅಶುದ್ಧಿಯಿರುವುದೆಂದು ಹೇಳುವ ಪಕ್ಷದಲ್ಲಿ ಅದು ಕ್ಷಣಿಕವಾಗಿದ್ದು ಸ್ನಾನಕ್ರಿಯೆಯಿಂದ ದೂರವಾಗುವುದು. ಮತ್ತು ಲಿಂಗಾಂಗಿಗಳು ಲಿಂಗೈಕ್ಯರಾಗುವುದರಿಂದ ಅವರಿಗೆ ಪ್ರಾಕೃತರಿಗಿರುವಂತೆ ಶ್ರಾದ್ಧಾದಿಗಳಿಲ್ಲ. ಆದರೆ, ಕಲ್ಯಾಣಕರವಾದ ಲಿಂಗೈಕ್ಯದಿನಾಚರಣೆಯನ್ನು ವರ್ಷಕ್ಕೊಮ್ಮೆ ಆಚರಿಸಿ, ಶಿವಭಕ್ತಭೋಜನವನ್ನು ಮಾಡಿಸಬಹುದು. ಈ ಪದ್ಧತಿಯು ಐಚ್ಛಿಕವಾಗಿರುವುದು. ಆದುದರಿಂದಲೇ ಲಿಂಗೈಕ್ಯರಾದವರಲ್ಲಿ ಕೆಲವರು ಪ್ರಸಿದ್ಧಪುರುಷರ ದಿನಾಚರಣೆಯನ್ನು ಮಾಡುವ ಸಂಪ್ರದಾಯವಿರುವುದು.

(೩) ಸೂತ್ರಕಾರನು ಇಷ್ಟಲಿಂಗದೊಡನೆ ದೇಹವನ್ನು ಸಮಾಧಿಯಲ್ಲಿರಿಸಬೇಕೆಂಬ ಪದ್ಧತಿಯನ್ನು ಮೊದಲು ವಿವರಿಸಿರುವನು. (ಇದೇ ಪದ್ಧತಿಯು ಸಂಪ್ರದಾಯದಲ್ಲಿರುವುದು) ಮತ್ತು ಪೂರ್ವಾಚಾರ್ಯರ ಅಭಿಪ್ರಾಯಭೇದಕ್ಕನುಸರಿಸಿ, ಗುರುಗಳಾದವರ ದೇಹದೊಡನೆ ಅವನ ಇಷ್ಟಲಿಂಗವನ್ನು ಸಮಾಧಿಯಲ್ಲಿರಿಸದೆ ತೆಗೆದುಕೊಂಡು ಬಂದು ಪೀಠದಲ್ಲಿಟ್ಟು ಪೂಜಿಸಬೇಕು. ಅಥವಾ ಅದನ್ನು ಧರಿಸಿಕೊಳ್ಳಬೇಕೆಂಬುದನ್ನೂ ವಿವರಿಸಿರುವನು. ಇದು ಪೂರ್ವಾಚಾರ್ಯರಲ್ಲಿ ಕೆಲವರ ಅಭಿಪ್ರಾಯ. ಈ ಅಭಿಪ್ರಾಯಕ್ಕೆ ಬಹುಮತವಿದ್ದಂತೆ ತೋರುವುದಿಲ್ಲ. ಆದುದರಿಂದಲೇ ಈ ಕ್ರಮವು ಸಂಪ್ರದಾಯದಲ್ಲಿ ಬಂದಿಲ್ಲ. ಆದರೆ, ಮಹನೀಯರಾದ ಗುರುಜಂಗಮರ ಮತ್ತು ಲಿಂಗೈಕ್ಯರಾದ ಕೆಲವರ ಪ್ರಸಿದ್ಧಪುರುಷರ ಸಮಾಧಿಗಳ ಮೇಲೆ ಅವರ ಹೆಸರಿನ ಸ್ಮಾರಕಲಿಂಗಗಳನ್ನಿಟ್ಟು ಪೂಜಿಸುವ ಸಂಪ್ರದಾಯವು ಸಮಾಜದಲ್ಲಿ ಬಹುಕಾಲದಿಂದ ಬಂದಿರುವುದು.

ಮೂರನೆಯ ವಿಷಯದಲ್ಲಿ ಗಮನಿಸಬೇಕಾದ ಅಂಶವು ಕೆಳಗಿನಂತಿರುವುದು:

ಗುರುಜಂಗಮರ ಸಮಾಧಿಯ ಮೇಲಿರಿಸಿದ ಸ್ಮಾರಕಲಿಂಗಗಳ ಪೂಜೋತ್ಸವಾದಿಗಳೇ ಪ್ರಬಲವಾಗಿ, ಆ ಗುರುಜಂಗಮರ ಪೀಠಾಧಿಕಾರವನ್ನು ಹೊಂದಿ ಜೀವಿಸಿರುವ ಗುರುಜಂಗಮರನ್ನು ಪೂಜಿಸಿ, ಅವರಿಂದ ತೀರ್ಥಪ್ರಸಾದಗಳನ್ನು ಪಡೆಯುವ ಮತ್ತು ಆ ಪೂಜ್ಯಪಾದರ ಬೋಧನಾದಿಫಲವನ್ನು ಪಡೆಯುವ ಕಾರ್ಯವು ಸಮಾಜದಲ್ಲಿ ಇತ್ತೀಚೆಗೆ ಕುಂಠಿತವಾಗುತ್ತಿರುವುದು. ಹೀಗೆ ಕುಂಠಿತಗೊಳಿಸದಂತೆ ಈಗಿನ ಗುರುಜಂಗಮರೂ ಸಮಾಜದವರೂ ಜಾಗ್ರತರಾಗಿರಬೇಕೆಂಬುದೇ ಅವರು ಗಮನಿಸಬೇಕಾದ ಮುಖ್ಯಾಂಶವು.

ಯ ಏತದಾಚರತ್ಯೇವಂ ಸ ಆಚಾರ್ಯವರೋ ವಿಭುಃ
ಪರಾನುಭವಸೂತ್ರೋಕ್ತಂ ಪರಮಾರ್ಥಂ ಪರಂ ಪದಂ ೧೧೯

ಇತಿ ಶ್ರೀಮಾಯಿದೇವ ವಿರಚಿತೇ
ಶ್ರೀಶಿವಸಿದ್ಧಾಂತತಂತ್ರೇ ವಿಶೇಷಾರ್ಥಪ್ರಕಾಶಿಕೇ ಗುರುಶಿಷ್ಯಸಂವಾದೇ
ದೇಹಾವಸಾನಂ ನಾಮ
ಪಂಚಮಾಧಿಕರಣಂ
ಸಂಪೂರ್ಣಂ

---

ಸೂ. ೧೧೯. ಪರಾನುಭವಸೂತ್ರೋಕ್ತವಾಗಿರುವ ಪರಮಾರ್ಥಪದ-ವಾದ ಈ ವಿಷಯವನ್ನು ಯಾವಾತನು ತಿಳಿದು ಆಚರಿಸುವನೋ; ಆತನೇ ಆಚಾರ್ಯಶ್ರೇಷ್ಠನಾಗಿ ವಿಭುವೆನಿಸುವನು.

ಇಂತು ಶ್ರೀ ಮಾಯಿದೇವ ವಿರಚಿತವಾದ
ಶ್ರೀಶಿವಸಿದ್ಧಾಂತತಂತ್ರರೂಪವಾದ ವಿಶೇಷಾರ್ಥಪ್ರಕಾಶಿಕೆಯಲ್ಲಿ
ಗುರುಶಿಷ್ಯಸಂವಾದಾತ್ಮಕವಾದ ದೇಹಾವಸಾನವಿಷಯುಕ
ಪಂಚಮಾಧಿಕರಣಂ
ಸಂಪೂರ್ಣಂ

ಓಂ ಶಿವಂ ಭೂಯಾತ್

॥ ಶ್ರೀಗುರುಬಸವಲಿಂಗಾಯನಮಃ ॥

# ಒಪ್ಪೋಲೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೪ | ದೇಶವಿಧಿ | ದೇಶವಿಧಿಃ |
| ೨ | ೪ | ದ್ವಿತಿಯೇ | ದ್ವಿತಿಯೇ |
| ೩ | ೮ | ವಿಶೇಷಾರ್ಥ ಪ್ರಕಾಶಕಂ | ವಿಶೇಷಾರ್ಥಪ್ರಕಾಶಕಂ |
| ೪ | ೨ | ಶಿವಸಿದ್ಧಾಂತ ತಂತ್ರಜಂ | ಶಿವಸಿದ್ಧಾಂತತಂತ್ರಜಂ |
| ೫ | ೭ | ತದಂತಃ ಕರ್ಣಿಕಾಯುಕ್ತಂ | ತದಂತಃಕರ್ಣಿಕಾಯುಕ್ತಂ |
| ೫ | ೧೦ | ಸದ್ಯೋ ಜಾತಾದಿಪಂಚಕಂ | ಸದ್ಯೋಜಾತಾದಿಪಂಚಕಂ |
| ೫ | ೨೧ | ಮಾಲೆ | ಮೂಲೆ |
| ೫ | ೨೨ | ಜ್ಯಾತಾದಿ | ಜಾತಾದಿ |
| ೬ | ೪ | ಆಚಾರಲಿಂಗ ಭಕ್ತಾಂಗ-ಪೂರ್ವಕಾನ್ | ಆಚಾರಲಿಂಗಭಕ್ತಾಂಗಪೂರ್ವ-ಕಾನ್ |
| ೬ | ೮ | ಕುಶದೂರ್ವಾಮ್ರ ಪಲ್ಲವಾನ್ | ಕುಶದೂರ್ವಾಮ್ರಪಲ್ಲವಾನ್ |
| ೭ | ೫ | ತಲ್ಲಿಂಗ ಮೌತ್ಸುಕ್ಯಂ | ತಲ್ಲಿಂಗಮೌತ್ಸುಕ್ಯಂ |
| ೭ | ೭ | ಸತಾರಂತು | ಸತಾರಂ ತು |
| ೮ | ೧ | ಶಿವಸಿದ್ಧಾಂತ ತಂತ್ರಕೇ | ಶಿವಸಿದ್ಧಾಂತತಂತ್ರಕೇ |
| ೧೩ | ೧೨ | ಸ್ತುತಿರ್ಯಾಚಾ | ಸ್ತುತಿರ್ಯಾಚ್ಞಾ |
| ೧೯ | ೮ | ಶಿವಾನುಭವಸೂತ್ರೇಽಸ್ಮಿಂಶ್ಶಿವ | ಶಿವಾನುಭವಸೂತ್ರೇಽಸ್ಮಿಶ್ಶಿವ |
| ೨೧ | ೪ | ವಸ್ತುನೇ | ವಸ್ತುವೇ |
| ೨೧ | ೯ | ಲಿಂಗಂ ಮೊರ್ತಿರುಮಾಪತೇ | ಲಿಂಗಂಮೂರ್ತಿರುಮಾಪತೇ |
| ೨೬ | ೧೪ | ಭಸ್ಮ ಸ್ನಾತ್ಕರುತೇಽರ್ಜುನ | ಭಸ್ಮಸ್ನಾತ್ಕುರುತೇಽರ್ಜುನ |
| ೨೭ | ೮ | ಸಂಪ್ರೀಯ ತಾಂ | ಸಂಪ್ರೀಯತಾಂ |
| ೩೦ | ೮ | ತದದ್ವಿಯೋಃ | ತದ್ದ್ವಯೋಃ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೪೧ | ೭ | ಪ್ರಸಾದರೂಪಕೆ | ಪ್ರಸಾದರೂಪಕ್ಕೆ |
| ೪೧ | ೯ | ಯಥಾರ್ಥವನು | ಯಥಾರ್ಥವನ್ನು |
| ೪೨ | ೭ | ಕೂಡಿದ | ಕೂಡಿ |
| ೪೨ | ೨೨ | ಪದಾರ್ಥವಾಸನೆ | ಪದಾರ್ಥಭಾವನೆ |
| ೧೩ | ೧೨ | ಭಕ್ತಿಕ್ರಿಯೆಗಗನ್ನ | ಭಕ್ತಿಕ್ರಿಯೆಗಳನ್ನು |
| ೪೪ | ೨ | ತತ್ವವಿದಾಂ | ತತ್ತ್ವವಿದಾಂ |
| ೪೬ | ೪ | ಶಂಭುರ್ಭಕ್ತೇರ್ವಿಧೇರ್ಯೋ | ಶಂಭುರ್ಭಕ್ತೇರ್ವಿಧೇಯೋಃ |
| ೪೯ | ೩ | ಪತತಿಸ್ವಯಂ | ಪತತಿ ಸ್ವಯಂ |
| ೫೦ | ೧ | ಮುಕ್ತಸ್ಯೈವ | ಮುಕ್ತಸ್ಯೇವ |
| ೫೦ | ೬ | ಆನಯೋರೈಕ್ಯಭಾವೇನ | ಅನಯೋರೈಕ್ಯಭಾವೇನ |
| ೫೧ | ೩ | ಪ್ರಸಾದೇಽಸ್ಮಿನ್‌ದಿಷ್ಟಾತ್ರೀ | ಪ್ರಸಾದೇಽಸ್ಮಿನ್ನದಿಷ್ಟಾತ್ರೀ |
| ೫೩ | ೨ | ಕಥಯಾಮಿತ್ವಾ | ಕಥಯಾಮೀ |
| ೫೫ | ೬ | ವಿಭಕ್ತಮುಸ್ಯೇತದರಥೋಕ್ತ | ವಿಭಕ್ತಮುಸ್ಯೇತದಥೋಕ್ತ |
| ೫೮ | ೫ | ಕಾಪೆ | ಕಾಪ್ಯೋ |
| ೫೮ | ೫ | ಲುಪ್ತೆ | ಲಪ್ತೇ |
| ೬೩ | ೮ | ಪೃಷ್ಟಮುಥೋಪಭುಕ್ತಂ | ಸ್ಪೃಷ್ಟಮುಥೋಪಭುಕ್ತಂ |
| ೬೩ | ೮ | ಪ್ರಸಿದ್ಧಂ | ಪ್ರಸಿದ್ಧಂ |
| ೬೪ | ೩ | ಆತೀಂದ್ರಿಯತ್ವಾ | ಅತೀಂದ್ರಿಯತ್ವಾ |
| ೬೪ | ೫ | ಆತೀಂದ್ರಿಯತ್ವಾ | ಅತೀಂದ್ರಿಯತ್ವಾ |
| ೬೭ | ೪ | ತತ್ರಸಾದಾಖ್ಯಂ | ತತ್ರಸಾದಾಖ್ಯಂ |
| ೭೦ | ೯ | ಸತ್ವರಜೋತವೋ | ಸತ್ತ್ವರಜೋತವೋದ |
| ೭೩ | ೫ | ಮಿತೂ | ಲಿಂಗಮಿತಿ |
| ೭೫ | ೧ | ಷೃಥ್ವಂಗಂ | ಪೃಥ್ವ್ಯಂಗಂ |
| ೭೫ | ೪ | ಭಕ್ತಾದ್ವೈಕ್ಯಂ | ಭಕ್ತಾದ್ಯೈಕ್ಯಂ |
| ೭೭ | ೧೦ | ಶಿಕಾರಮನ | ಶಿಕಾರಮನು |
| ೮೨ | ೪ | ಶೃಣು | ಶೃಣು |
| ೮೨ | ೭ | ಅನುಗ್ರಹದಿಂದ್ತ | ಅನುಗ್ರಹದಿಂದ |
| ೮೨ | ೮ | ಪ್ರಾಪಿ | ಪ್ರಾಪ್ತಿ |
| ೮೨ | ೧೧ | ಮುಹತ್ವವನ್ನು | ಮಹತ್ತ್ವವನ್ನು |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೮೨ | ೧೪ | ಮುಹತ್ವವು | ಮುಹತ್ತ್ವವು |
| ೮೩ | ೨೫ | ಮುಹತ್ವವು | ಮುಹತ್ತ್ವವು |
| ೮೪ | ೭ | ಪ್ರಸಾಷ್ಟಕ | ಪ್ರಸಾದಾಷ್ಟಕ |
| ೮೫ | ೮ | ಆಭೇದ | ಅಭೇದ |
| ೮೮ | ೫ | ಸತ್ತತ್ತ್ವ | ಸಸ್ತತ್ತ್ವ |
| ೮೮ | ೧೬ | ಬ್ರಹ್ಮಸ್ಯರೂಪವು | ಬ್ರಹ್ಮಸ್ವರೂಪವು |
| ೮೯ | ೧ | ದೃಷ್ಟಾ | ದ್ರಷ್ಟಾ |
| ೮೯ | ೨ | ದೃಷ್ಟವ್ಯೋ | ದ್ರಷ್ಟವ್ಯೋ |
| ೮೯ | ೪ | ದೃಷ್ಟಾ | ದ್ರಷ್ಟಾ |
| ೮೯ | ೫ | ದೃಷ್ಟವ್ಯೋ | ದ್ರಷ್ಟವ್ಯೋ |
| ೮೯ | ೧೪ | ದೃಷ್ಟ | ದ್ರಷ್ಟ |
| ೮೯ | ೧೪ | ದೃಷ್ಟವ್ಯ | ದ್ರಷ್ಟವ್ಯ |
| ೮೯ | ೧೯ | ದೃಷ್ಟವ್ಯ | ದ್ರಷ್ಟವ್ಯ |
| ೯೧ | ೨೩ | ಶಿವಭಕ್ತಿಯರೇ | ಶಿವಶಕ್ತಿಯರಿ |
| ೯೪ | ೭ | ಜ್ಯೋತಿಃ ಸ್ವರೂಪಾಯ | ಜ್ಯೋತಿಃಸ್ವರೂಪಾಯ |
| ೯೫ | ೧೬ | ನಾಲು | ನಾಲ್ಕು |
| ೯೭ | ೧೩ | ತ್ರಿಮೂರ್ತಸ್ವರೂ- | ತ್ರಿಮೂತ್ರಾಸ್ವರೂ- |
| ೯೯ | ೫ | ಪ್ರಭಾವ ವೃದ್ಧ್ಯರ್ಥ | ಪ್ರಭಾವವೃದ್ಧ್ಯರ್ಥ |
| ೧೦೧ | ೪ | ಪರಮಾತ್ಮನೇ | ಪರಮಾತ್ಮನೇ |
| ೧೦೩ | ೨ | ಪು ಷ್ಯತಃ | ಪುಷ್ಪತಃ |
| ೧೦೩ | ೧೯ | ವಾವು | ವಾಪು |
| ೧೦೫ | ೧ | ಜಾಪ್ಯಾತ್ | ಜಾಪ್ಯ |
| ೧೦೫ | ೪ | ಕುರ್ವಸ್ಮೇನಸ್ಯ | ಕುರ್ವನ್ ಮನಸ್ಯ |
| ೧೦೫ | ೫ | ಯತ್ರಮರುತ್ತತ್ರ | ಯತ್ರ ಮರುತ್ತತ್ರ |
| ೧೦೬ | ೪ | ಶಸಕೈರುದೀರಿತಮನುಃ | ಶನಕೈರುದೀರಿತಮನಃ |
| ೧೦೭ | ೩ | ಮಹಾಂತಂಚೈಕಮೇವ | ಮಹಾಂತಂ ಚೈಕಮೇವ |
| ೧೦೮ | ೩ | ಷಡೂರ್ಮಿ ಷಡ್ಭಾವ ಷಡರಿವರ್ಗಾದ್ಯಾಃ | ಷಡೂರ್ಮಿಷಡ್ಭಾವಷಡರಿ- ವರ್ಗಾದ್ಯಾಃ |
| ೧೦೮ | ೪ | ಷಟ್‌ಸ್ಥಲರೂಪ ಷಡಕ್ಷರ | ಷಟ್‌ಸ್ಥಲರೂಪಷಡಕ್ಷರ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೦೯ | ೧ | ಪ್ರಸಿದೇತಿ | ಪ್ರಸೀದೇತಿ |
| ೧೦೫ | ೧೭ | ಶಿವಲಿಂಗ ವೆನಿಸುವುದು | ಶಿವಲಿಂಗವೆನಿಸುವುದು |
| ೧೧೮ | ೧೮ | ಗೋಲಾಗಿರುವುದು | ಗೋವಾಗಿರುವುದು |
| ೧೧೯ | ೧೬ | ಮಾಡಿದ | ಮಾಡದ |
| ೧೨೧ | ೧೦ | ಪ್ರಾಣಲಿಂಗವಾಗಿಯ | ಪ್ರಾಣಲಿಂಗಾಂಗಯೋಗಿಯು |
| ೧೨೨ | ೨೫ | ಪ್ರಾಣಲಿಂಗಿಗಳ | ಪ್ರಾಣಲಿಂಗಗಳ |
| ೧೨೪ | ೧೨ | ಪಾರ್ಥಿವಾಗಿ | ಪಾರ್ಥಿವವಾಗಿ |
| ೧೨೪ | ೧೩ | ಪಾರ್ಥವಾಗಿ | ಪಾರ್ಥಿವವಾಗಿ |
| ೧೨೬ | ೫ | ಚಾರ್ಯೆರ್ಮಾರ್ಗ | ಚಾರ್ಯೈರ್ಮಾರ್ಗ |
| ೧೨೬ | ೯ | ಅಹಿತಃ | ಆಹಿತಃ |
| ೧೨೮ | ೨೦ | ಲಿಂಗಗಳ | ಲಿಂಗಾಂಗಗಳ |
| ೧೨೯ | ೨ | ವಿಥ್ಯರ್ಥೇಪಿ | ವಿಧ್ಯರ್ಥೇಪಿ |
| ೧೨೯ | ೬ | ತಚ್ಛಿಕಾಸೂತ್ರ | ತಚ್ಛಿಖಾಸೂತ್ರ |
| ೧೩೩ | ೨ | ಧ್ಯುವಂ | ಧ್ರುವಂ |
| ೧೩೪ | ೪ | ಕಲ್ಲ್ಯಾಣಮೇವ | ಕಲ್ಯಾಣಮೇವ |
| ೧೩೪ | ೧೫ | ಕಲ್ಲ್ಯಾಣಕರ ಕ್ರಿಯೆಯನ್ನೇ | ಕಲ್ಯಾಣಕರಕ್ರಿಯೆಯನ್ನೇ |
| ೧೩೯ | ೨ | ಸಾಕ್ಷಾತ್ತ್ಚರಿತ್ರಂ | ಸಾಕ್ಷಾತ್ತಾಚ್ಚರಿತ್ರಂ |
| ೧೩೯ | ೩ | ಗುರುಚರಶಿವಮೂರ್ತೀನಾಂ | ಗುರು ಚರಮೂರ್ತೀನಾಂ |
| ೧೪೨ | ೫ | ಕಲ್ಲ್ಯಾಣಕರವಾದ | ಕಲ್ಯಾಣಕರವಾದ |

